KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ ಅಕ್ಟೋಬರ್ ೨, ೨೦೦೮ (ಆಶ್ವಯುಜ ೧೦, ಶಕ ವರ್ಷ ೧೯೩೦) | ಸಂಚಿಕೆ ೪೦ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಮಹಮ್ಮದ್ ಸೈಫುಲ್ಲಾ, ಹಿಂದಿನ ತಹಶೀಲ್ದಾರ್, ಬ್ಯಾಡಗಿ (ಪ್ರಸ್ತುತ ನಿವೃತ್ತರು) ಇವರ ವಿರುದ್ಧದ ಶಿಸ್ತು ಕ್ರಮದ ಬಗ್ಗೆ.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ಹಾವೇರಿ ಇವರ ಪತ್ರದ ಸಂ: ಸಿಬ್ಬಂದಿ(1):ಇವಿ: ವಹಿ: 7: 2006–07, ದಿನಾಂಕ: 10–05–2007.

2) ಕಾರಣ ಕೇಳುವ ನೋಟೀಸು ಸಂ: ಆರ್‌ಡಿ 36 ಎಡಿಇ 2007, ದಿನಾಂಕ: 27–02–2008.

3) ಶ್ರೀ ಮಹಮ್ಮದ್ ಸೈಫುಲ್ಲಾ, ನಿವೃತ್ತ ತಹಶೀಲ್ದಾರ್, ಇವರ ಲಿಖಿತ ಹೇಳಿಕೆ.

**ಪ್ರಸ್ತಾವನೆ:**

ಶ್ರೀ ಮಹಮ್ಮದ್ ಸೈಫುಲ್ಲಾ, ನಿವೃತ್ತ ತಹಶೀಲ್ದಾರ್ ಇವರು ಈ ಹಿಂದೆ ಬ್ಯಾಡಗಿ ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಬ್ಯಾಡಗಿ ತಾಲ್ಲೂಕು ಕಾಟೇನಹಳ್ಳಿ ಗ್ರಾಮದ ರಿ.ಸ.ನಂ: 54/2 ಕ್ಷೇತ್ರ 5–00 ಎಕರೆ ಜಮೀನಿನ ಖಾತೆ ಬದಲಾವಣೆ ವಿಷಯದಲ್ಲಿ ಕರ್ತವ್ಯ ಲೋಪ ಎಸಗಿದ ಕಾರಣ, ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಕೋರಿ ಜಿಲ್ಲಾಧಿಕಾರಿಗಳು, ಹಾವೇರಿ ಇವರು ಮೇಲೆ ಕ್ರ.ಸಂ: (1)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಮೇಲೆ ಕ್ರ.ಸಂ: (2)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ಸದರಿಯವರಿಗೆ ನೀಡಲಾಗಿದೆ. ಕ್ರ.ಸಂ.(3)ರಲ್ಲಿ ಓದಲಾದ ಪತ್ರದಲ್ಲಿ ಸದರಿ ಕಾರಣ ಕೇಳುವ ನೋಟೀಸಿಗೆ ಶ್ರೀ ಮಹಮ್ಮದ್ ಸೈಫುಲ್ಲಾ, ಇವರು ತಮ್ಮ ಲಿಖಿತ ಸಮಜಾಯಿಷಿಯನ್ನು ನೀಡಿ ತಮ್ಮ ವಿರುದ್ಧ ಮಾಡಲಾದ ಆರೋಪಗಳನ್ನು ಅಲ್ಲಗೆಳೆದಿರುತ್ತಾರೆ. ಹಾಗೂ ನ್ಯಾಯ ಸಮ್ಮತ ವಿಚಾರಣೆ ನಡೆಸಿ, ತಮ್ಮನ್ನು ಆರೋಪ ಮುಕ್ತರನ್ನಾಗಿ ಮಾಡುವಂತೆ ಕೋರಿದ್ದಾರೆ.

ಈ ಹಿನ್ನಲೆಯಲ್ಲಿ ಆಪಾದಿತ ಅಧಿಕಾರಿ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡು ಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 36 ಎಡಿಇ 2007, ಬೆಂಗಳೂರು, ದಿನಾಂಕ: 29ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 214ನ್ನು ಓದಿಕೊಂಡು ನಿಯಮ 11ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಮಹಮ್ಮದ್ ಸೈಫುಲ್ಲಾ, ಹಿಂದಿನ ತಹಶೀಲ್ದಾರ್, ಬ್ಯಾಡಗಿ (ಪ್ರಸ್ತುತ ನಿವೃತ್ತರು)ಇವರ ವಿರುದ್ಧದ ಆಪಾದನೆಗೆ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಜೆ.ಸಿ. ಗುಡ್ಡಾಕಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು. ಗಣಪತಿ ಗುಡಿ ಹತ್ತಿರ, ಸಂಗೊಳ್ಳಿ ರಾಯಣ್ಣ ನಗರ, ಧಾರವಾಡ–580002 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು, ಹಾವೇರಿ ಜಿಲ್ಲೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳ ಈ ಪ್ರಕರಣದ ವಿಚಾರಣೆಯನ್ನು ಜಿಲ್ಲಾಧಿಕಾರಿಗಳು ಹಾವೇರಿ ಜಿಲ್ಲೆ, ಹಾವೇರಿ ಇವರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗಡಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ: ಸಿಆಸುಇ 22 ಸೇಇವಿ 2007, ದಿ:11–04–2008 ರನ್ವಯ ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ)ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ.1,500/– (ಒಂದು ಸಾವಿರದ ಐದುನೂರು ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್) ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11ಎ ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ, ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** ಶ್ರೀ ಡಿ.ಪಿ. ಪ್ರಾಣೇಶ್‌ಕುಮಾರ್, ತಹಶೀಲ್ದಾರ್ ಗುಡಿಬಂಡೆ ತಾಲ್ಲೂಕು ಚಿಕ್ಕಬಳ್ಳಾಪುರ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಚಿಕ್ಕಬಳ್ಳಾಪುರ ಜಿಲ್ಲೆ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ ಸಿಬ್ಬಂದಿ (1) ಸಿಆರ್.94/08–09, ದಿನಾಂಕ 25–7–2008.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆ, ಗುಡಿಬಂಡೆ ತಾಲ್ಲೂಕು, ಸೋಮೇನಹಳ್ಳಿ ಹೋಬಳಿ, ಜಂಟಿಬೋಯನಹಳ್ಳಿ ಗ್ರಾಮದ ಸರ್ವೆ ನಂ. 19 ಪ್ಯಾಯಲಚಿನ್ನಪ್ಪನಹಳ್ಳಿ ಗ್ರಾಮದ ಸರ್ವೆ ನಂ. 6 ಮತ್ತು ಬಂದಾರ್ಲಹಳ್ಳಿ ಗ್ರಾಮದ ಸರ್ವೆ ನಂ. 32ರ ಜಮೀನುಗಳ ಗಣಕೀಕೃತ ಪಹಣಿಯ ಕಲಂ 9ರಲ್ಲಿ ಖಾತೆದಾರರ ಹೆಸರನ್ನು ಅಕ್ರಮವಾಗಿ ನಮೂದು ಮಾಡಿರುವ ಬಗ್ಗೆ ಸಾರ್ವಜನಿಕರಿಂದ ಮೌಖಿಕವಾಗಿ ದೂರುಗಳು ಬಂದ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರು ಗುಡಿಬಂಡೆ ತಾಲ್ಲೂಕು ಕಛೇರಿಗೆ ಖುದ್ದು ಭೇಟಿ ನೀಡಿ ದಾಖಲೆಗಳನ್ನು ಪರಿಶೀಲಿಸಿದಾಗ ತಹಶೀಲ್ದಾರ್ ಗುಡಿಬಂಡೆ ತಾಲ್ಲೂಕು ರವರು ಎಸಗಿರುವ ಕರ್ತವ್ಯಲೋಪಗಳು/ ಅಧಿಕಾರ ದುರುಪಯೋಗ ಕಂಡುಬಂದಿದ್ದು ಸಂಬಂಧಿತರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕೇಂದ್ರಸ್ಥಾನಿಕ ಸಹಾಯಕರು, ಚಿಕ್ಕಬಳ್ಳಾಪುರ ಇವರು ಜಿಲ್ಲಾಧಿಕಾರಿಗಳಿಗೆ ವರದಿ ಮಾಡಿರುತ್ತಾರೆ. ತಪಾಸಣೆ ಸಮಯದಲ್ಲಿ ಎಸಗಿರುವ ಲೋಪಗಳ ಕುರಿತ ವರದಿಗಳು ಈ ಕೆಳಕಂಡಂತಿದೆ:

1) ಜಂಟಿ ಬೋಯಿನಹಳ್ಳಿ ಸ.ನಂ. 19ರ ಒಟ್ಟು ವಿಸ್ತೀರ್ಣ 107–19 ಎಕರೆ, ಸರ್ಕಾರಿ ಗೋಕಾಡು ಇದ್ದು, ಈ ಪೈಕಿ 2–00 ಎಕರೆ ಜಮೀನು ವಡ್ಡರ ರಾಮಣ್ಣ ಎಂಬುವರಿಗೆ ಮಂಜೂರಾಗಿರುವ ಬಗ್ಗೆ 2006–07ನೇ ಗಣಕೀಕೃತ ಪಹಣಿಯಂತೆ ದಾಖಲಾಗಿರುತ್ತದೆ. ಆದರೆ 2007–08ನೇ ಸಾಲಿನ ಗಣಕೀಕೃತ ಪಹಣಿಯ ಅಂಕಣ 9ರಲ್ಲಿ 15 ಜನರ ಹೆಸರನ್ನು ಸೇರಿಸಿ ಇವರ ಹೆಸರಿಗೆ ಒಟ್ಟು 52–00 ಎಕರೆ ಜಮೀನನ್ನು ಖಾತೆ ಮಾಡಿರುವಂತೆ ನಮೂದಿಸಿರುತ್ತದೆ. ಇದು ಜಾತಾ 53–19 ಎಕರೆ ಉಳಿದಿರುತ್ತೆ. ಈ ರೀತಿ ನಮೂದಿಸಲು ತಹಶೀಲ್ದಾರ್ ಗುಡಿಬಂಡೆ ತಾಲ್ಲೂಕುರವರು ನಂ. ಆರ್‌ಆರ್‌ಟಿ–ಸಿಆರ್ 404/07–08, ದಿನಾಂಕ 17–3–2008ರಂತೆ ಆದೇಶ ನೀಡಿದ್ದು, ಅದರಂತೆ ಪಹಣಿಯಲ್ಲಿ ಹೆಸರುಗಳನ್ನು ನಮೂದಿಸಿರುತ್ತದೆ.

2) ತಹಶೀಲ್ದಾರ್ ರವರು ತಮ್ಮ ಆದೇಶದಲ್ಲಿ 11 ಜನರ ಹೆಸರಿಗೆ 40–00 ಎಕರೆ ಜಮೀನು ಪಹಣಿ ಅಂಕಣ 09ರಲ್ಲಿ ಸೇರಿಸಲು ಆದೇಶಿಸಿದ್ದು, ಎಂ.ನಂ. 6/07–08ರಂತೆ ಮ್ಯುಟೇಶನ್ ಆಗಿರುತ್ತದೆ. ಆದರೆ ಪಹಣಿಯಲ್ಲಿ 15 ಜನರ ಹೆಸರನ್ನು 52–00 ಎಕರೆಗೆ ಸೇರಿಸಲಾಗಿರುತ್ತದೆ.

3) ಪ್ಯಾಯಲ ಚಿನ್ನಪ್ಪನಹಳ್ಳಿ ಸ.ನಂ. 6ರ ಒಟ್ಟು ವಿಸ್ತೀರ್ಣ 46–37 ಎಕರೆ ಸರ್ಕಾರಿ ಖರಾಬ್ ಇರುತ್ತದೆ. 2006–07ನೇ ಸಾಲಿನವರೆಗೆ ಗಣಕೀಕೃತ ಪಹಣಿಯಂತೆ ಅಂಕಣ 9ರಲ್ಲಿ 46–37 ಎಕರೆ ಸರ್ಕಾರಿ ಖರಾಬ್ ಎಂದೇ ನಮೂದಿರುತ್ತದೆ. 2007–08ನೇ ಸಾಲಿನಲ್ಲಿ ಪಹಣಿ ಅಂಕಣ 9ರಲ್ಲಿ 6 ಜನರನ್ನು ಖಾತೆದಾರರನ್ನಾಗಿ ಸೇರಿಸಿ, ಒಟ್ಟು 13–20 ಎಕರೆ ಪ್ರದೇಶವನ್ನೂ ಅವರ ಹೆಸರಿಗೆ ಖಾತೆದಾರರೆಂದು ನಮೂದಿಸಿರುತ್ತದೆ. ಅದು ಜಾತಾ 33–17 ಎಕರೆ ಉಳಿದಿರುತ್ತದೆ. ಈ ಬಗ್ಗೆ ತಹಶೀಲ್ದಾರ್‌ರವರು ನಂ. ಆರ್‌ಆರ್‌ಟಿಸಿಆರ್ 392/07–08 ದಿನಾಂಕ 30–3–2008ರಂತೆ ಆದೇಶ ಮಾಡಿರುತ್ತಾರೆ.

4) ತಹಶೀಲ್ದಾರ್‌ರು ತಮ್ಮ ಆದೇಶದಲ್ಲಿ 5 ಜನರ ಹೆಸರು, 11–00 ಎಕರೆ ಜಮೀನಿಗೆ ಖಾತೆದಾರರೆಂದು ಸೇರಿಸಲು ಆದೇಶಿಸಿರುತ್ತಾರೆ. ಆದರೆ ಮ್ಯುಟೇಶನ್ ನಂ. ಎಂ.ಆರ್.10–07–08ರಂತೆ 6 ಜನರ ಹೆಸರಿಗೆ 13–20 ಎಕರೆಗೆ ಖಾತೆದಾರರೆಂದು ಸೇರಿಸಿ ಅದರಂತೆ ಪಹಣಿ ಕಾಲಂ 9ರಲ್ಲೂ ನಮೂದಿಸಿರುತ್ತದೆ.

5) ಬಂದಾರ್ಲಹಳ್ಳಿ ಸ.ನಂ. 32ರ ಒಟ್ಟು 32–20 ಎಕರೆ ಸರ್ಕಾರಿ ಗೋಮಾಳ ಎಂದು ಪಹಣಿಯಂತೆ ನಮೂದಾಗಿರುತ್ತದೆ. 2006–07ರವರೆಗೆ ಸರ್ಕಾರಿ ಗೋಮಾಳ ಎಂದೇ ಪಹಣಿಯಲ್ಲಿ ಅಂಕಣ 9ರಂತೆ ನಮೂದಾಗಿದ್ದು, ದಿನಾಂಕ 10–2–2007ರಿಂದ ಪಹಣಿ ಅಂಕಣ 9ರಲ್ಲಿ 6 ಜನರ ಹೆಸರನ್ನು 20–20 ಎಕರೆ ಜಮೀನಿಗೆ ಖಾತೆದಾರರೆಂದು ನಮೂದಿಸಿರುತ್ತದೆ.

6) ಈ ಬಗ್ಗೆ ತಹಶೀಲ್ದಾರ್‌ರವರು ಸಂ.ಎಲ್‌ಎನ್‌ಡಿಸಿಆರ್ 02/07–08, ದಿನಾಂಕ 10–2–2007ರಂತೆ ಆದೇಶ ಮಾಡಿರುತ್ತಾರೆ. ಈ ಬಗ್ಗೆ ಆರ್‌ಐ–ಎಸ್‌ಪಿಆರ್ 331/07–08 ದಿನಾಂಕ 10–2–2007ರಂತೆ ರಾಜಸ್ವ ನಿರೀಕ್ಷಕರು ವರದಿ ಸಲ್ಲಿಸಿದ್ದು, ಅದೇ ದಿನವೇ ತಹಶೀಲ್ದಾರ್‌ರವರು ಆದೇಶ ನೀಡಿರುವಂತೆ ಪಹಣಿಯಲ್ಲಿ ನಮೂದಿರುತ್ತದೆ. ಆದರೆ 10–2–2007ರ ಅವಧಿಯಲ್ಲಿ ಹಾಲಿ ತಹಶೀಲ್ದಾರರು ಗುಡಿಬಂಡೆಯಲ್ಲಿ ಕರ್ತವ್ಯದಲ್ಲಿರುವುದಿಲ್ಲ.

7) ತಹಶೀಲ್ದಾರ್ ಈ ರೀತಿಯಾಗಿ ಆದೇಶ ಮಾಡಿರುವುದಕ್ಕೆ ಮೂಲ ದಿನಾಂಕ 10–2–2007ರಂದು ಪಹಣಿಯಲ್ಲಿ ಹೆಸರು ನಮೂದಿಸುವ ಬಗ್ಗೆ ಅರ್ಜಿಗಳು ಸ್ವೀಕೃತವಾಗಿರುತ್ತದೆ. ಅದೇ ದಿನವೇ ರಾಜಸ್ವ ನಿರೀಕ್ಷಕರವರು ವರದಿ ನೀಡಿರುತ್ತಾರೆ. ಅದೇ ದಿನ ತಹಶೀಲ್ದಾರ್ ಆದೇಶ ನೀಡಿರುತ್ತಾರೆ. ದಿನಾಂಕ 10–2–2007ರಂದು ಆದೇಶ ಮಾಡಿರುವುದನ್ನು 11–6–2008ರಂದು ಮ್ಯುಟೇಶನ್ ಅಂಗೀಕರಿಸಿ ಪಹಣಿಯಲ್ಲಿ ದಾಖಲು ಮಾಡಿರುತ್ತಾರೆ.

8) ಪ್ಯಾಯಲಚಿನ್ನಪ್ಪನಹಳ್ಳಿ ಸ.ನಂ. 6ಕ್ಕೆ ಸಂಬಂಧಿಸಿದಂತೆ ಪಹಣಿ ಅಂಕಣ 9ರಲ್ಲಿ ಹೆಸರುಗಳನ್ನು ನಮೂದಿಸುವ ಬಗ್ಗೆ ದಿನಾಂಕ 9–3–2007ರಂದು ಸಂಬಂಧಪಟ್ಟವರಿಂದ ಅರ್ಜಿಗಳು ಬಂದಿದ್ದು, ರಾಜಸ್ವ ನಿರೀಕ್ಷಕರು ಸಂ. ಆರ್‌ಐ.ಎಸ್‌ಪಿಆರ್ 263/07–08 ದಿನಾಂಕ 10–3–2007ರಂತೆ ಮಾರನೇ ದಿನವೇ ವರದಿ ಸಲ್ಲಿಸಿರುತ್ತಾರೆ. ಈ ವರದಿ ಕಛೇರಿಗೆ ಸ್ವೀಕೃತವಾದ ಬಗ್ಗೆ ಕಛೇರಿ ಮುದ್ರೆಯಾಗಲೀ, ಯಾವುದೇ ಸಹಿಯಾಗಲೀ ಇರುವುದಿಲ್ಲ. ಈ ವರದಿ ಆಧಾರದ ಮೇಲೆ ತಹಶೀಲ್ದಾರರು ಆರ್‌ಆರ್‌ಟಿಸಿಆರ್ 392/07–08, ದಿನಾಂಕ 30–3–2008ರಂತೆ ಆದೇಶ ಮಾಡಿರುತ್ತಾರೆ.

9) ತಹಶೀಲ್ದಾರರು ಈ ರೀತಿ ಆದೇಶಗಳು ಮಾಡಿರುವುದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸಂಬಂಧಪಟ್ಟವರಿಂದ ಹಿಂದಿನ ದಿನಾಂಕಗಳಂದು ಅಂದರೆ 10–2–2007 ಮತ್ತು 9–3–2007ರಂದು ಅರ್ಜಿಗಳನ್ನು ಸ್ವೀಕರಿಸಿದ ಬಗ್ಗೆ ತಹಶೀಲ್ದಾರ್‌ರ ಸಣ್ಣ ಸಹಿ ಅರ್ಜಿಗಳ ಮೇಲೆ ನಮೂದಿರುತ್ತದೆ. ಈ ಬಗ್ಗೆ 10–2–2007 ಮತ್ತು 10–3–2007ರಂದು ರಾಜಸ್ವ ನಿರೀಕ್ಷಕರು ವರದಿ ಸಲ್ಲಿಸಿದಂತೆ ತಿಳಿದು ಬರುತ್ತದೆ. ಅದರಂತೆ ತಹಶೀಲ್ದಾರ್‌ರು ಎಲ್‌ಎನ್‌ಡಿಸಿಆರ್ 02/07–08 ದಿನಾಂಕ 10–2–2007ರಂತೆ ಒಂದು ಪ್ರಕರಣದಲ್ಲಿ ಮತ್ತು ಆರ್‌ಆರ್‌ಟಿಸಿಆರ್ 392/2007–08 ದಿನಾಂಕ 30–3–2008ರಂತೆ ಒಂದು ವರ್ಷದ ನಂತರ ಮತ್ತೊಂದು ಪ್ರಕರಣದ ಬಗ್ಗೆ ಆದೇಶ ಮಾಡಿರುವುದು ಕಂಡುಬರುತ್ತದೆ. ಈ ರೀತಿ ವಿವಿಧ ದಿನಾಂಕಗಳಂದು ಅರ್ಜಿಗಳನ್ನು ಪಡೆದಂತೆ ವಿವಿಧ ದಿನಾಂಕಗಳಂದು ರಾಜಸ್ವ ನಿರೀಕ್ಷಕರು ವರದಿ ಸಲ್ಲಿಸಿರುವಂತೆ ಹಾಗೂ ವಿವಿಧ ದಿನಾಂಕಗಳಂದು ಆದೇಶ ಮಾಡಿದಂತೆ ವ್ಯವಸ್ಥಿತವಾಗಿ ಕಾರ್ಯಾಚರಣೆ ಮಾಡಿರುವುದು ಕಂಡುಬರುತ್ತದೆ. ಆದರೆ ಯಾವುದೇ ಅರ್ಜಿಯ ಮೇಲಾಗಲಿ ರಾಜಸ್ವ ನಿರೀಕ್ಷಕರು ವರದಿಯ ಮೇಲಾಗಲಿ ಕಛೇರಿಯ ಮೊಹರು, ದಿನಾಂಕ, ಕಛೇರಿಯ ಮುಖ್ಯಸ್ಥರ ಸಹಿ ಇತ್ಯಾದಿಗಳು ನಮೂದಾಗಿರುವುದಿಲ್ಲ. ಒಟ್ಟಾರೆಯಾಗಿ ಈ ಬಗ್ಗೆ ಕಛೇರಿಯ ಕಾರ್ಯವಿಧಾನ ಲವಲೇಶವೂ ಅನುಸರಣೆ ಆಗಿರುವುದಿಲ್ಲ.

10) ದಿನಾಂಕ 10–3–2008ರಿಂದ ಈ ತಹಲ್‌ವರೆಗೆ ಹಕ್ಕುದಾಖಲೆ ಶಿರಸ್ತೇದಾರರ ಲಾಗಿನ್‌ನ್ನು ತಹಶಿಲ್ದಾರರೇ ವಹಿಸಿಕೊಂಡಿರುತ್ತಾರೆ.

11) ಪಹಣಿಗಳಲ್ಲಿ ಯಾವುದೇ ತಿದ್ದುಪಡಿಗಳನ್ನು ಮಾಡಬೇಕಾದಲ್ಲಿ ಕಂದಾಯ ಇಲಾಖೆಯಲ್ಲಿ ಅಸಿಸ್ಟೆಂಟ್ ಕಮೀಷನರ್‌ರವರಿಗೆ ಅಧಿಕಾರವಿರುತ್ತದೆ. ತಿದ್ದುಪಡಿಗಳ ಬಗ್ಗೆ ತಹಶೀಲ್ದಾರ್‌ರವರು ಅಸಿಸ್ಟೆಂಟ್ ಕಮೀಷನರ್ ರವರಿಗೆ ಪ್ರಸ್ತಾವನೆ ಸಲಿಸಬೇಕಾಗಿದ್ದು, ಇವರು ಅಧಿಕಾರ ದುರುಪಯೋಗ ಮಾಡಿರುತ್ತಾರೆ.

ತಹಶೀಲ್ದಾರ್ ಗುಡಿಬಂಡೆ ತಾಲ್ಲೂಕು ಇವರು ತಮ್ಮ ಪ್ರಭಾವ ಬೀರಿ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು ಮೇಲ್ನೋಟಕ್ಕೆ ಕಂಡುಬಂದಿದ್ದು ಸದರಿಯವರನ್ನು ಕೂಡಲೇ ಸೇವೆಯಿಂದ ನಿಲಂಬನೆಗೊಳಿಸಿ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರು ಶಿಫಾರಸ್ಸು ಮಾಡಿರುತ್ತಾರೆ.

ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಲಾಗಿ ಗುಡಿಬಂಡೆ ತಾಲ್ಲೂಕು ತಹಶೀಲ್ದಾರ್‌ರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಡಿ.ಪಿ. ಪ್ರಾಣೇಶ್‌ಕುಮಾರ್ ಇವರು ತಮ್ಮ ಸ್ಥಾನದ ಪ್ರಭಾವ ಬೀರಿ ಅಧಿಕಾರ ದುರುಪಯೋಗ ಹಾಗೂ ಕರ್ತವ್ಯಲೋಪ ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ. ಆದುದರಿಂದ ಸದರಿಯವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಗೊಳಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಕಂಇ 38 ಎಡಿಇ 2008, ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(1)(ಡಿ) ರನ್ವಯ ಶ್ರೀ ಡಿ.ಪಿ. ಪ್ರಾಣೇಶ್‌ಕುಮಾರ್, ತಹಶೀಲ್ದಾರ್ ಗುಡಿಬಂಡೆ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ ಇವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಸದರಿ ಅಧಿಕಾರಿಗಳು ಅಮಾನತ್ತಿನ ಅವಧಿಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರನ್ವಯ ಜೀವನಾಂಶ ಭತ್ಯೆ (subsistence allowance) ಪಡೆಯಲು ಅರ್ಹರಾಗಿರುತ್ತಾರೆ ಹಾಗೂ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ಇವರ ಪೂರ್ವಾನುಮತಿಯಿಲ್ಲದೆ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಶ್ರೀ ಎಲ್.ಸಿ. ನಾಗರಾಜ್, ತಹಶೀಲ್ದಾರ್ ಚಿಕ್ಕಬಳ್ಳಾಪುರ ತಾಲ್ಲೂಕುರವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಗುಡಿಬಂಡೆ ತಾಲ್ಲೂಕು ತಹಶೀಲ್ದಾರ್ ಹುದ್ದೆಯ ಅಧಿಕ ಪ್ರಭಾರದಲ್ಲಿರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಮರಳವಾಡಿ ಹೋಬಳಿ, ಜಕ್ಕಸಂದ್ರ ಗ್ರಾಮದ ಜೈನ್ ವಿದ್ಯಾ ಸಂಸ್ಥೆಯೊಂದಿಗೆ ಶಾಮೀಲಾಗಿ ಅಕ್ರಮ ಖಾತೆ ಬದಲಾವಣೆ ಮಾಡಿರುವ ಅಧಿಕಾರಿ/ ನೌಕರರ ವಿರುದ್ಧದ ಆಪಾದನೆಗೆ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ:**
1. ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪ್ರಸ್ತಾವನೆ ಸಂಖ್ಯೆ ಸಿಸಿಎ 9/2002–03, ದಿನಾಂಕ 18–3–2003.
2. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ ಆರ್‌ಡಿ 06 ಎಡಿಇ 2005, ದಿನಾಂಕ 15–12–2005.
3. ಶ್ರೀ ಬಿ.ಎಚ್. ಶಿವಪ್ಪ, ತಹಶೀಲ್ದಾರ್ ಇವರ ರಕ್ಷಣಾ ಹೇಳಿಕೆ ದಿನಾಂಕ 3–1–2006 ಮತ್ತು 20–1–2006.
4. ಶ್ರೀ ಕೃಷ್ಣ, ಹಿಂದಿನ ಗ್ರಾಮಲೆಕಿಗರು ಇವರ ರಕ್ಷಣಾ ಹೇಳಿಕೆ ದಿನಾಂಕ 5–4–2006.
5. ಶ್ರೀ ನಾರಾಯಣಗೌಡ, ಹಿಂದಿನ ಪ್ರಭಾರ ಗ್ರಾಮಲೆಕ್ಕಿಗರು ಇವರ ರಕ್ಷಣಾ ಹೇಳಿಕೆ ದಿನಾಂಕ 6–2–2006.
6. ಶ್ರೀ ಶಿವಣ್ಣಶಾಸ್ತ್ರಿ, ಹಿಂದಿನ ರಾಜಸ್ವ ನಿರೀಕ್ಷಕರು ಇವರ ರಕ್ಷಣಾ ಹೇಳಿಕೆ ದಿನಾಂಕ 27–1–2006.

**ಪ್ರಸ್ತಾವನೆ :**

ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ, ಬೆಂಗಳೂರು ಇವರು ಮೇಲೆ ಓದಲಾದ (1)ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಮರಳವಾಡಿ ಹೋಬಳಿ, ಜಕ್ಕಸಂದ್ರ ಗ್ರಾಮದ ಜೈನ್ ವಿದ್ಯಾ ಸಂಸ್ಥೆಯವರು ವಿವಿಧ ಸರ್ವೆ ಸಂಖ್ಯೆಗಳಲ್ಲಿ ಜಮೀನುಗಳನ್ನು ಖರೀದಿಸಿದ್ದು, ಈ ಖರೀದಿಯಲ್ಲಿ ಭೂಸುಧಾರಣಾ ಕಾಯ್ದೆ, ಭೂಮಂಜೂರಾತಿ ಕಾಯ್ದೆ

ಹಾಗೂ ಪಿಟಿಸಿಎಲ್ ಕಾಯ್ದೆಗಳನ್ನು ಸ್ಪಷ್ಟವಾಗಿ ಉಲ್ಲಂಘನೆ ಮಾಡಿ ಅಕ್ರಮ ಖಾತೆ ಬದಲಾವಣೆ ಮಾಡಿರುವ ಆಪಾದನೆಗೆ ಈ ಕೆಳಕಂಡ ಅಧಿಕಾರಿ/ನೌಕರರು ಸಿಲುಕಿರುತ್ತಾರೆ.

1. ಶ್ರೀ ಎಸ್. ಸೀತಾರಾಮಯ್ಯ, ಹಿಂದಿನ ತಹಶೀಲ್ದಾರ್, ಕನಕಪುರ, ಪ್ರಸ್ತುತ ನಿವೃತ್ತ ಕೆಎಎಸ್ ಅಧಿಕಾರಿ.
2. ಶ್ರೀ ಬಿ.ಹೆಚ್. ಶಿವಪ್ಪ, ಹಿಂದಿನ ಆರ್.ಆರ್. ಶಿರಸ್ತೇದಾರ್, ಕನಕಪುರ.
3. ಶ್ರೀ ಶಿವಣ್ಣಶಾಸ್ತ್ರಿ, ಹಿಂದಿನ ರಾಜಸ್ವ ನಿರೀಕ್ಷಕರು, ಮರಳವಾಡಿ ವೃತ್ತ
4. ಶ್ರೀ ಜಿ.ಎಸ್. ರಾಜಣ್ಣ, ಹಿಂದಿನ ರಾಜಸ್ವ ನಿರೀಕ್ಷಕರು, ಮರಳವಾಡಿ, ಕನಕಪುರ ತಾ.
5. ಶ್ರೀ ನಾರಾಯಣಗೌಡ, ಹಿಂದಿನ ಪ್ರಭಾರ ಗ್ರಾಮಲೆಕ್ಕಿಗರು, ದೊಡ್ಡಸಾತೇನಹಳ್ಳಿ.
6. ಶ್ರೀ ಕೃಷ್ಣ, ಹಿಂದಿನ ಗ್ರಾಮಲೆಕ್ಕಿಗರು, ದೊಡಸಾತೇನಹಳ್ಳಿ.

ಆದುದರಿಂದ, ಅವರುಗಳ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮಗಳನ್ವಯ ಜಂಟಿ ಇಲಾಖಾ ವಿಚಾರಣೆ ಜರುಗಿಸಿ, ಶಿಸ್ತು ಕ್ರಮ ಕೈಗೊಳ್ಳ ಅನುಬಂಧ 1–4ರವರೆಗೆ ಕರಡು ದೋಷಾರೋಪಣಾ ಪಟ್ಟಿಯನ್ನು ತಯಾರಿಸಿ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸರ್ಕಾರವು ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ ತಿಳಿಸಲಾದ ಕ್ರಮ ಸಂಖ್ಯೆ 1 ರಿಂದ 6ರ ವರೆಗಿನ ಅಧಿಕಾರಿ/ ನೌಕರರ ಪೈಕಿ ಮೊದಲನೇ ಆರೋಪಿಯಾದ ಶ್ರೀ ಸೀತಾರಾಮಯ್ಯ, ಹಿಂದಿನ ತಹಶೀಲ್ದಾರ್ ಇವರು ದಿನಾಂಕ 31–7–2002ರಂದು ಸೇವೆಯಿಂದ ವಯೋನಿವೃತ್ತಿ ಹೊಂದಿದ್ದಾರೆ. ಆದುದರಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮಗಳನ್ವಯ ಹಾಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214 ರಡಿ ಶಿಸ್ತು ಕ್ರಮ ಕೈಗೊಳ್ಳಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ. ಆದುದರಿಂದ ಅವರ ವಿರುದ್ಧ ಸಿವಿಲ್ ದಾವೆ ಹೂಡಲು ಪ್ರತ್ಯೇಕವಾಗಿ ಕ್ರಮ ಕೈಗೊಳ್ಳಲು ಉದ್ದೇಶಿಸಿ, ಉಳಿದ ಕ್ರಮ ಸಂಖ್ಯೆ 2 ರಿಂದ 5 ರವರೆಗಿನ ಅಧಿಕಾರಿ/ನೌಕರರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ಜೊತೆಗೆ 13ರನ್ನೊಳಗೊಂಡಂತೆ ಜಂಟಿ ವಿಚಾರಣೆ ಜರುಗಿಸಲು ಮೇಲೆ (2)ರಲ್ಲಿ ಓದಲಾದ ದಿನಾಂಕ 15–12–2005ರಲ್ಲಿ ಅನುಬಂಧ 1 ರಿಂದ 4 ರವರೆಗೆ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಗಿದೆ.

ಸಕಾರದ ಕಾರಣ ಕೇಳುವ ನೋಟೀಸಿಗೆ ಉತ್ತರವಾಗಿ ಶ್ರೀ ಬಿ.ಎಚ್. ಶಿವಪ್ಪ, ಹಿಂದಿನ ಆರ್.ಆರ್. ತಹಶೀಲ್ದಾರ್, ಶ್ರೀ ಕೃಷ್ಣ, ಹಿಂದಿನ ಗ್ರಾಮಲೆಕ್ಕಿಗ, ಶ್ರೀ ನಾರಾಯಣಗೌಡ, ಹಿಂದಿನ ಪ್ರಭಾರ ಗ್ರಾಮಲೆಕ್ಕಿಗರು, ಶ್ರೀ ಶಿವಣ್ಣಶಾಸ್ತ್ರಿ, ಹಿಂದಿನ ರಾಜಸ್ವ ನಿರಕ್ಷಕರು ಇವರುಗಳು ಕ್ರಮವಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ 3 ರಿಂದ 6ರವರೆಗೆ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು, ಆಪಾದನೆಯನ್ನು ಅಲ್ಲಗಳೆದಿರುತ್ತಾರೆ ಹಾಗೂ ಶ್ರೀ ಜಿ.ಎಸ್. ರಾಜಣ್ಣ, ಹಿಂದಿನ ರಾಜಸ್ವ ನಿರೀಕ್ಷಕರು ಇವರು ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲ. ಆದುದರಿಂದ ಆಪಾದಿತರುಗಳು ನೀಡಿರುವ ರಕ್ಷಣಾ ಹೇಳಿಕೆ ಹಾಗೂ ಪ್ರಕರಣದ ಸತ್ಯಾಸತ್ಯತೆಯನ್ನು ಪರಿಶೀಲಿಸಲು ಈ ಪ್ರಕರಣವನ್ನು ಇಲಾಖಾ ವಿಚಾರಣೆಗೆ ವಹಿಸಲು ನಿರ್ಧರಿಸಿ ಶ್ರೀ ಟಿ.ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷೆನ್ಸ್ ನ್ಯಾಯಾಧೀಶರು, ನಂ. 648, ಎರಡನೇ ಅಡ್ಡರಸ್ತೆ, 8ನೇ ಮುಖ್ಯರಸ್ತೆ, 3ನೇ ಹಂತ, ಬಸವೇಶ್ವರ ನಗರ, ಬೆಂಗಳೂರು–79 ಇವರನ್ನು ವಿಚಾರಣಾ ಪ್ರಾಧಿಕಾರಿಗಳನ್ನಾಗಿ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 06 ಎಡಿಇ 2004, ದಿನಾಂಕ: 31ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ಜೊತೆಗೆ 13 ಗಳನ್ನೊಳಗೊಂಡಂತೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಸರ್ಕಾರವು ಈ ಕೆಳಕಂಡ ಅಧಿಕಾರಿ/ನೌಕರರುಗಳ ವಿರುದ್ಧದ ಆಪಾದನೆಗೆ ಇಲಾಖಾ ವಿಚಾರಣೆ ಜರುಗಿಸಲು ಆದೇಶಿಸಿದೆ.

1. ಶ್ರೀ ಬಿ.ಎಚ್. ಶಿವಪ್ಪ, ಹಿಂದಿನ ಆರ್.ಆರ್. ಶಿರಸ್ತೇದಾರ್, ಕನಕಪುರ.
2. ಶ್ರೀ ಶಿವಣ್ಣಶಾಸ್ತ್ರಿ, ಹಿಂದಿನ ರಾಜಸ್ವ ನಿರೀಕ್ಷಕರು, ಮರಳವಾಡಿ ವೃತ್ತ.
3. ಶ್ರೀ ಜಿ.ಎಸ್. ರಾಜಣ್ಣ, ಹಿಂದಿನ ರಾಜಸ್ವ ನಿರೀಕ್ಷಕರು, ಮರಳವಾಡಿ, ಕನಕಪುರ ತಾ.
4. ಶ್ರೀ ನಾರಾಯಣಗೌಡ, ಹಿಂದಿನ ಪ್ರಭಾರ ಗ್ರಾಮಲೆಕ್ಕಿಗರು, ದೊಡ್ಡಸಾತೇನಹಳ್ಳಿ.
5. ಶ್ರೀ ಕೃಷ್ಣ, ಹಿಂದಿನ ಗ್ರಾಮಲೆಕ್ಕಿಗರು, ದೊಡ್ಡಸಾತೇನಹಳ್ಳಿ.

ಈ ಪ್ರಕರಣದಲ್ಲಿ ವಿಚಾರಣಾ ಪ್ರಾಧಿಕಾರಿಗಳನ್ನಾಗಿ ಶ್ರೀ ಟಿ.ಜೆ. ಮರಿಯಪ್ಪ, ನಿವೃತ್ತ ಜಿಲ್ಲಾ ಮತ್ತು ಸೆಷೆನ್ಸ್ ನ್ಯಾಯಾಧೀಶರು, ನಂ. 648, ಎರಡನೇ ಅಡ್ಡರಸ್ತೆ, 8ನೇ ಮುಖ್ಯರಸ್ತೆ, 3ನೇ ಹಂತ, ಬಸವೇಶ್ವರ ನಗರ, ಬೆಂಗಳೂರು–79 ಇವರನ್ನು ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾ ಪ್ರಾಧಿಕಾರದ ಮುಂದೆ ಮಂಡಿಸಲು ವಿಚಾರಣಾ ಪ್ರಾಧಿಕಾರಿಗಳನ್ನಾಗಿ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಲು ನಿರ್ಧರಿಸಿದೆ. 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರ ಕಚೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ, ನಿಗದಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಚೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಚೇರಿಯಲ್ಲಿ ಲಭ್ಯವಿರುವ ಶಿಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ. ಸಿಆಸುಇ 22 ಸೇಇವಿ 2007, ದಿನಾಂಕ 11–4–2008ರನ್ವಯ ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ)ಗಳ ಸಂಚಿತ ಸಂಭಾವನೆಯನ್ನು ಹಾಗೂ ರೂ. 1,500/– (ಒಂದು ಸಾವಿರದ ಐದುನೂರು ರೂಪಾಯಿಗಳು ಮಾತ್ರ)ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯನ್ಸ್)ಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11ಎ ರಲ್ಲಿನ ವಿಧಿವಿಧಾನವನ್ನು ಅನುಸರಿಸಿ, ಜರುಗಿಸಿ ವಿಚಾರಣಾ ವರದಿಯನ್ನು ಆರು ತಿಂಗಳೊಳಗಾಗಿ ಸರ್ಕಾರಕ್ಕೆ ಸಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** ಶ್ರೀ ಸೈಯದ್ ಸಜ್ಜದ್ ಅಹಮದ್, ಪ್ರಾಚಾರ್ಯರು, ಭೂಮಾಪನ ತರಬೇತಿ ಸಂಸ್ಥೆ, ಗುಲ್ಬರ್ಗಾರವರ ವಿರುದ್ಧ ಇಲಾಖಾ ವಿಚಾರಣೆ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**

1. ನಿರ್ದೇಶಕರು, ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆರವರ ಅ.ಸ. ಪತ್ರ ಸಂಖ್ಯೆ ಸಿಬ್ಬಂದಿ ಶಿಸ್ತು 22/04–05, ದಿ: 14–3–05.
2. ಸರ್ಕಾರದ ಆದೇಶ ಸಂಖ್ಯೆ ಕಂಇ 18 ಭೂದಾಸೇ (1) 2007, ದಿ: 2–5–2007.
3. ನೋಟೀಸ್ ಸಂಖ್ಯೆ ಕಂಇ 18 ಭೂದಾಸೇ (1) 2007, ದಿ: 1–3–2008.
4. ಅಧಿಸೂಚನೆ ಸಂಖ್ಯೆ ಕಂಇ 04 ಭೂದಾಸೇ (1) 2008, ದಿ: 25–3–2008.
5. ಶ್ರೀ ಸೈಯದ್ ಸಜ್ಜದ್ ಅಹಮದ್‌ರವರು ದಾಖಲೆ ಪ್ರತಿ ಕೋರಿದ ದಿ: 5–4–2008ರ ಮನವಿ.
6. ಹಿಂಬರಹ ಸಂಖ್ಯೆ ಕಂಇ 18 ಭೂದಾಸೇ (1) 2007, ದಿ: 8–4–2008.
7. ಶ್ರೀ ಸೈಯದ್ ಸಜ್ಜದ್ ಅಹಮದ್‌ರವರ ಪತ್ರ ಸಂಖ್ಯೆ ಸಿಬ್ಬಂದಿ/ಇತರೆ/4/2008–09, ದಿ: 17–4–08.
8. ಹಿಂಬರಹ ಸಂಖ್ಯೆ ಕಂಇ 18 ಭೂದಾಸೇ (1) 2007, ದಿ: 6–5–2008.

**ಪ್ರಸ್ತಾವನೆ :**

ನಿರ್ದೇಶಕರು, ಭೂಮಾಪನ ಇಲಾಖೆ ರವರು ಮೇಲೆ (1)ರಲ್ಲಿ ಓದಲಾದ ದಿ: 14–3–2005ರ ಪತ್ರದಲ್ಲಿ ಶ್ರೀ ಸೈಯದ್ ಸಜ್ಜದ್ ಅಹಮದ್, ಪ್ರಾಚಾರ್ಯರು, ಭೂಮಾಪನ ತರಬೇತಿ ಸಂಸ್ಥೆ, ಮೈಸೂರಿನ ಪ್ರಾಚಾರ್ಯರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ದಿ: 9–3–2005ರಂದು ನಿರ್ದೇಶಕರು, ಭೂಮಾಪನ ಇಲಾಖೆಯ ಕೇಂದ್ರ ಕಛೇರಿಯಿಂದ ಕೇಂದ್ರ ಸ್ಥಾನಿಕ ಸಹಾಯಕರು ಅನಿರೀಕ್ಷಿತ ಭೇಟಿ ನೀಡಿದ ಸಂದರ್ಭದಲ್ಲಿ ಸಂಸ್ಥೆಯ ಮುಖ್ಯಸ್ಥರಾದ ಪ್ರಾಚಾರ್ಯರು ಮಧ್ಯಾಹ್ನ 12.30ಕ್ಕೆ ಕಛೇರಿಗೆ ಹಾಜರಾಗಿರುತ್ತಾರೆ. ದಿ: 1–2–2005 ರಿಂದ 16–2–05ರವರೆಗೆ ಮೇಲಾಧಿಕಾರಿಗಳ ಪೂರ್ವಾನುಮತಿ ಇಲ್ಲದೆ ಗೈರು ಹಾಜರಾಗಿರುವುದು, ಸಂಸ್ಥೆಗೆ ನೀಡಲಾದ ವಾಹನವನ್ನು ಸ್ವಂತಕ್ಕೆ ಉಪಯೋಗಿಸಿರುವುದು ಕಛೇರಿಯ ದೂರವಾಣಿಯನ್ನು ಮಿತಿ ಮೀರಿ ಸ್ವಂತಕ್ಕೆ ಬಳಸಿ ದುರುಪಯೋಗಪಡಿಸಿಕೊಂಡಿರುವುದು ಒಂದೇ ಕಛೇರಿಯಲ್ಲಿ ಕಾರ್ಯ

ನಿರ್ವಹಿಸುತ್ತಿರುವ ನೌಕರರಿಗೆ ತಾರತಮ್ಯ ತೋರಿಸಿ ಅಧಿಕಾರ ದುರುಪಯೋಗ ಪಡಿಸಿಕೊಂಡಿರುವುದು ಮುಂತಾದ ದುರ್ನಡತೆ ಎಸಗಿರುವ ಅಂಶಗಳು ಕಂಡು ಬಂದ ಹಿನ್ನೆಲೆಯಲ್ಲಿ ಶ್ರೀ ಸೈಯದ್ ಸಜ್ಜದ್ ಅಹಮದ್, ಪ್ರಾಚಾರ್ಯರುರವರ ವಿರುದ್ಧ ಗಂಭೀರ ಸ್ವರೂಪದ ಆರೋಪಗಳಿರುವುದರಿಂದ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಡಲು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಶಿಫಾರಸ್ಸಿನನ್ವಯ ಮೇಲೆ (2)ರಲ್ಲಿ ಓದಲಾದ ದಿ: 2–5–2007ರ ಸರ್ಕಾರಿ ಆದೇಶದಲ್ಲಿ ಶ್ರೀ ಸೈಯದ್ ಸಜ್ಜದ್ ಅಹಮದ್ ರವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿರಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿ: 1–3–2008 ನೋಟೀಸ್‌ನಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 ಮತ್ತು 11(ಎ) ರನ್ವಯ ಆರೋಪ ಪಟ್ಟಿ (ಅನುಬಂಧ–1 ರಿಂದ 4) ಜೊತೆಯಲ್ಲಿ ಕಾರಣ ಕೇಳಿ ನೋಟೀಸ್ ಹೊರಡಿಸಲಾಯಿತು.

ಮೇಲೆ (4)ರಲ್ಲಿ ಓದಲಾದ ದಿ: 25–3–2008ರ ಅಧಿಸೂಚನೆಯಲ್ಲಿ ಶ್ರೀ ಸೈಯದ್ ಸಜ್ಜದ್ ಅಹಮದ್ ರವರ ಮೇಲಿನ ಅಮಾನತ್ತನ್ನು ತೆರವುಗೊಳಿಸಿ ಇಲಾಖಾ ವಿಚಾರಣೆ ಕಾಯ್ದಿರಿಸಿ ಪ್ರಾದೇಶಿಕ ತರಬೇತಿ ಸಂಸ್ಥೆ, ಗುಲ್ಬರ್ಗಾದ ಪ್ರಾಚಾರ್ಯರ ಹುದ್ದೆಗೆ ನೇಮಕ ಮಾಡಲಾಯಿತು.

ಶ್ರೀ ಸೈಯದ್ ಸಜ್ಜದ್ ಅಹಮದ್‌ರವರು ಮೇಲೆ (5)ರಲ್ಲಿ ಓದಲಾದ ದಿ: 5–4–2008ರಲ್ಲಿ ಮನವಿ ಸಲ್ಲಿಸಿ ಆರೋಪ ಪಟ್ಟಿ ಅನುಬಂಧ–3ರ ಎಂಟು ದಾಖಲೆಗಳ ದೃಢೀಕೃತ ಪಟ್ಟಿ ಒದಗಿಸಲು ಕೋರಿದ್ದರು. ಅದರಂತೆ ಮೇಲೆ (6)ರಲ್ಲಿ ಓದಲಾದ ದಿ: 8–4–2008ರ ಹಿಂಬರದಲ್ಲಿ ಅವರು ಕೋರಿರುವ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಒದಗಿಸಲಾಯಿತು.

ಶ್ರೀ ಸೈಯದ್ ಸಜ್ಜದ್ ಅಹಮದ್‌ರವರು ಮೇಲೆ (7)ರಲ್ಲಿ ಓದಲಾದ ದಿ: 17–4–2008ರ ಪತ್ರ ಬರೆದು ದಿನಾಂಕ: 1–3–2008ರ ಕಾರಣ ಕೇಳಿ ನೋಟೀಸ್‌ಗೆ ಲಿಖಿತ ಉತ್ತರ ನೀಡಲು ಒಂದು ತಿಂಗಳ ಕಾಲ ಹೆಚ್ಚುವರಿ ಸಮಯಾವಕಾಶ ನೀಡುವಂತೆ ಕೋರಿದ್ದಾರೆ.

ಈ ಬಗ್ಗೆ ಮೇಲೆ (8)ರಲ್ಲಿ ಓದಲಾದ ದಿ: 6–5–2008ರ ಹಿಂಬರಹದಲ್ಲಿ ಆರೋಪಿತರಾದ ಶ್ರೀ ಸೈಯದ್ ಸಜ್ಜದ್ ಅಹಮದ್‌ರವರಿಗೆ ದಿ: 15–5–2008ರವರೆಗೆ ಲಿಖಿತ ಉತ್ತರ ನೀಡಲು ಸಮಯಾವಕಾಶ ನೀಡಲಾಗಿತ್ತು. ಆದರೆ ಸದರಿ ಸಮಯಾವಕಾಶ ಕಳೆದ 3 ತಿಂಗಳುಗಳು ಕಳೆದರೂ ಸಹ ಆರೋಪಿತರು ಲಿಖಿತ ಸಮರ್ಥನೆ/ಸಮಜಾಯಿಷಿ ನೀಡಿರುವುದಿಲ್ಲ.

ಈ ಬಗ್ಗೆ ನಿಗದಿತ ಕಾಲಾವಕಾಶ ಮುಗಿದಿರುವುದಿರಿಂದ ಪ್ರಕರಣದ ವಿಚಾರಣೆಯನ್ನು ತ್ವರಿತವಾಗಿ ಪ್ರಾರಂಭಿಸಲು ನಿರ್ಧರಿಸಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಕ ಮಾಡಲು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 18 ಭೂದಾಸೇ (1) 2007, ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಸೈಯದ್ ಇಲಿಯಾಸ್ ಅಹಮದ್ ಜಂಟಿ ನಿರ್ದೇಶಕರು (ವಿಚಾರಣೆ ಮತ್ತು ತನಿಖೆ) ಕೇಂದ್ರ ಕಛೇರಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ಅಜ್ಜಪ್ಪ, ವಿಚಾರಣಾಧಿಕಾರಿಗಳು ನಗರಮಾಪನ–3, ಬೆಂಗಳೂರು ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸುತ್ತದೆ ಹಾಗೂ ವಿಚಾರಣಾಧಿಕಾರಿಗಳು ವಿಚಾರಣೆಯನ್ನು 3 ತಿಂಗಳೊಳಗಾಗಿ ಪೂರೈಸಿ ಸರ್ಕಾರಕ್ಕೆ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1174

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಾಪನ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಎ.ಬಿ. ದಿನಕರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 7ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 123 ಪಿಪಿಇ 85, ದಿನಾಂಕ 13–6–1986.
2. ಸರ್ಕಾರದ ಅದೇಶದ ಸಂ. ಲಾ 11 ಪಿಪಿಇ 87, ದಿನಾಂಕ 26–5–1987.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 11–12–2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ. ಡಿಪಿಎನ್/ಲೆಕ್ಕ–1/301/2007–08, ದಿನಾಂಕ 7–1–2008.

**ಪ್ರಸ್ತಾವನೆ :**

ಶ್ರೀ ಎ.ಬಿ. ದಿನಕರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 7ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆಯಂತೆ ದಿನಾಂಕ 13-6-1986, ಕ್ರ.ಸಂ. 5ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ 26-6-86ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 12-8-1954 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ 26-5-1987ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ 12-8-1954 ಆಗಿದ್ದು, ಅವರು ದಿನಾಂಕ 26-6-1986ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 31 ವರ್ಷಗಳ 10 ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರದ ಪ್ರಕಾರ 30 ವರ್ಷಕ್ಕಿಂತ ಮೇಲ್ಪಟ್ಟ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದಲ್ಲಿ ಅಂತಹ ಅವಧಿಯನ್ನು ಗರಿಷ್ಟ ನಾಲ್ಕು ವರ್ಷಗಳ ಮಿತಿ ಒಳಪಟ್ಟು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರಿಸಲು ಅವಕಾಶವಿರುವುದರಿಂದ ಗರಿಷ್ಠ ಮಿತಿಯ ಹೆಚ್ಚುವರಿ ಸೇವೆಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಆದೇಶ ಹೊರಡಿಸಿ, ಮಹಾಲೇಖಪಾಲರ ಕಛೇರಿಗೆ ಪ್ರತಿಯನ್ನು ಕಳುಹಿಸಿಕೊಡಬೇಕೆಂದು ಸದರಿ ಅಧಿಕಾರಿಯು ಮನವಿ ಮಾಡಿಕೊಂಡಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು, ಶ್ರೀ ಎ.ಬಿ. ದಿನಕರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 7ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ, ಇವರು ದಿನಾಂಕ 26-6-1986ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಇವರ ಜನ್ಮ ದಿನಾಂಕ 12-8-1954 ಆಗಿರುತ್ತದೆ. ಸದರಿ ಅಧಿಕಾರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ಪ್ರಕಾರ ನಿವೃತ್ತಿ ವೇತನಕ್ಕೆ 1 ವರ್ಷದ ಸೇವೆಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಶಿಫಾರಸ್ಸನ್ನು ಮಾಡಿರುತ್ತಾರೆ ಹಾಗೂ ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದ್ದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 21 ಪಿಪಿಇ 2008, ಬೆಂಗಳೂರು, ದಿನಾಂಕ: 23ನೇ ಜುಲೈ 2008.**

ಶ್ರೀ ಎ.ಬಿ. ದಿನಕರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರಂತೆ ಪಿಂಚಣಿ ಸೌಲಭ್ಯಗಳಿಗೆ ಹೆಚ್ಚುವರಿಯಾಗಿ 1 (ಒಂದು) ವರ್ಷದ ಅರ್ಹತಾದಾಯಕ ಸೇವೆಯನ್ನು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 640 ವೆಚ್ಚ-7/2008 ದಿನಾಂಕ 2-7-2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಷಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಂ.ಆರ್. ಬನ್ನಿಹಟ್ಟಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 5ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 161 ಪಿಪಿಇ 86 , ದಿನಾಂಕ: 24.017.1989.
2. ಸರ್ಕಾರದ ಪತ್ರದ ಸಂ. ಲಾ 55 ಪಿಪಿಇ 91, ದಿನಾಂಕ: 12.12.91
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 29.11.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ-1/280/2007-08, ದಿನಾಂಕ: 07.01.2008.

**ಪ್ರಸ್ತಾವನೆ:**

ಶ್ರೀ ಎಂ.ಆರ್. ಬನ್ನಿಹಟ್ಟಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 5ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 24.07.1989, ಕ್ರ.ಸಂ:38ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 02.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 01.07.1957 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 12.12.91ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ: 01.07.1957 ಆಗಿದ್ದು, ಅವರು ದಿನಾಂಕ: 02.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 32ವರ್ಷಗಳ 1ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾಳಿಯ ನಿಯಮ 247(ಎ)ರ ಪ್ರಕಾರ 30 ವರ್ಷಕ್ಕಿಂತ ಮೇಲ್ಪಟ್ಟ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದಲ್ಲಿ ಅಂತಹ ಅವಧಿಯನ್ನು ಗರಿಷ್ಠ ನಾಲ್ಕು ವರ್ಷಗಳ ಮಿತಿ ಒಳಪಟ್ಟು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರಿಸಲು ಅವಕಾಶವಿರುವುದರಿಂದ 2ವರ್ಷ 1ತಿಂಗಳ ಸೇವೆಯನ್ನು ಸೇರ್ಪಡೆ ಮಾಡಿ ಆದೇಶ ಹೊರಡಿಸಿ, ಮಹಾಲೇಖಪಾಲರ ಕಛೇರಿಗೆ ಪ್ರತಿಯನ್ನು ಕಳುಹಿಸಿಕೊಡಬೇಕೆಂದು ಸದರಿ ಅಧಿಕಾರಿಯು ಮನವಿ ಮಾಡಿಕೊಂಡಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು, ಶ್ರೀ ಎಂ.ಆರ್. ಬನ್ನಿಹಟ್ಟಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 5ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ, ಇವರು ದಿನಾಂಕ: 02.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಇವರ ಜನ್ಮ ದಿನಾಂಕ: 01.07.1957 ಆಗಿರುತ್ತದೆ. ಸದರಿ ಅಧಿಕಾರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ಪ್ರಕಾರ ನಿವೃತ್ತಿ ವೇತನಕ್ಕೆ 2 ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಶಿಫಾರಸ್ಸನ್ನು ಮಾಡಿರುತ್ತಾರೆ ಹಾಗೂ ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 24 ಪಿಪಿಇ 2008, ಬೆಂಗಳೂರು, ದಿನಾಂಕ : 23ನೇ ಜುಲೈ 2008.**

ಶ್ರೀ ಬನ್ನಿಹಟ್ಟಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರಿಗೆ ಕೆ.ಸಿ.ಎಸ್.ಆರ್ಸ್ ನ ನಿಯಮ 247(ಎ) ರನ್ವಯ ನಿವೃತ್ತಿ ಸೌಲಭ್ಯಕ್ಕಾಗಿ ಹೆಚ್ಚುವರಿಯಾಗಿ 2(ಎರಡು) ವರ್ಷಗಳನ್ನು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 639 ವೆಚ್ಚ–7/2008, ದಿನಾಂಕ 03.07.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಸಿದ್ದಲಿಂಗಪ್ಪ ಬೋರೆಡ್ಡಿ, ಸರ್ಕಾರಿ ಅಭಿಯೋಜಕರು, ರಾಯಚೂರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 67ಪಿಪಿಇ 82 , ದಿನಾಂಕ: 22.12.82.
2. ಸರ್ಕಾರದ ಆದೇಶದ ಸಂ. ಲಾ 54 ಪಿಪಿಇ 83, ದಿನಾಂಕ: 21.06.1983.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 31.12.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/310/2007–08, ದಿನಾಂಕ: 01.02.2008.

**ಪ್ರಸ್ತಾವನೆ:**

ಶ್ರೀ ಸಿದ್ದಲಿಂಗಪ್ಪ ಬೋರೆಡ್ಡಿ, ಸರ್ಕಾರಿ ಅಭಿಯೋಜಕರು, ರಾಯಚೂರು, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆಯ ದಿನಾಂಕ: 22.12.82 ಕ್ರ.ಸಂ:10ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ

ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 10.01.1983ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 16.05.1950 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 21.06.1983ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ: 16.05.1950 ಆಗಿದ್ದು, ಅವರು ದಿನಾಂಕ: 10.01.1983ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 32 ವರ್ಷ 7 ತಿಂಗಳು, 24 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾಳಿಯ ನಿಯಮ 247(ಎ)ರ ಪ್ರಕಾರ 30 ವರ್ಷಕ್ಕಿಂತ ಮೇಲ್ಪಟ್ಟ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದಲ್ಲಿ ಅಂತಹ ಅವಧಿಯನ್ನು ಗರಿಷ್ಠ ನಾಲ್ಕು ವರ್ಷಗಳ ಮಿತಿ ಒಳಪಟ್ಟು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವಿರುವುದರಿಂದ 2ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಆದೇಶ ಹೊರಡಿಸಿ, ಮಹಾಲೇಖಪಾಲರ ಕಛೇರಿಗೆ ಪ್ರತಿಯನ್ನು ಕಳುಹಿಸಿಕೊಡಬೇಕೆಂದು ಸದರಿ ಅಧಿಕಾರಿಯು ಮನವಿ ಮಾಡಿಕೊಂಡಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು, ಶ್ರೀ ಸಿದ್ದಲಿಂಗಪ್ಪ ಬೋರೆಡ್ಡಿ, ಸರ್ಕಾರಿ ಅಭಿಯೋಜಕರು, ರಾಯಚೂರು, ಇವರು ದಿನಾಂಕ: 10.01.1983ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಇವರ ಜನ್ಮ ದಿನಾಂಕ: 16.05.1950 ಆಗಿರುತ್ತದೆ. ಸದರಿ ಅಧಿಕಾರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ಪ್ರಕಾರ ನಿವೃತ್ತಿ ವೇತನಕ್ಕೆ 2 ವರ್ಷದ ಸೇವೆಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಶಿಫಾರಸ್ಸನ್ನು ಮಾಡಿರುತ್ತಾರೆ ಹಾಗೂ ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 63 ಪಿಪಿಇ 2008 ಬೆಂಗಳೂರು, ದಿನಾಂಕ : 23ನೇ ಜುಲೈ 2008.**

ಶ್ರೀ ಸಿದ್ದಲಿಂಗಪ್ಪ ಬೋರಡ್ಡಿ, ಸರ್ಕಾರಿ ಅಭಿಯೋಜಕರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರಂತೆ ಪಿಂಚಣಿ ಸೌಲಭ್ಯಗಳಿಗೆ ಹೆಚ್ಚುವರಿಯಾಗಿ 2(ಎರಡು) ವರ್ಷಗಳ ಅರ್ಹತಾದಾಯಕ ಸೇವೆಯನ್ನು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 638 ವೆಚ್ಚ–7/2008, ದಿನಾಂಕ 02.07.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 1095

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಮಹದೇವಪ್ಪಾ ಸಾಸನೂರ, ಹಿಂದಿನ ತಹಶೀಲ್ದಾರ್, ಇಂಡಿ, ಬಿಜಾಪುರ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸಿರುವುದನ್ನು ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ. ಆರ್‌ಡಿ 03 ಎಡಿಇ 2008, ದಿನಾಂಕ 25–2–2008.
2. ಶ್ರೀ ಮಹದೇವಪ್ಪಾ ಸಾಸನೂರ ಇವರ ಮನವಿ ದಿನಾಂಕ 21–3–2008 ಮತ್ತು 7–6–2008.

**ಪ್ರಸ್ತಾವನೆ :**

ಶ್ರೀ ಮಹದೇವಪ್ಪಾ, ಸಾಸನೂರ, ಹಿಂದಿನ ತಹಶಿಲ್ದಾರ್, ಇಂಡಿ ಬಿಜಾಪುರ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ 2006–07ನೇ ಸಾಲಿನಲ್ಲಿ ಕಟಾವು ಆಗದೆ ನೊಂದಾಯಿತವಲ್ಲದ ಪಕ್ವವಾದ ಹಾಗೂ ಕಾರ್ಖಾನೆಯಲ್ಲಿ ನುರಿಸಲ್ಪಡದೆ ದಿನಾಂಕ 31–5–2007ರಲ್ಲಿದ್ದಂತೆ ಉಳಿಯುವ ಕಬ್ಬುಗಳಿಗೆ ನಷ್ಟ ಪರಿಹಾರವನ್ನು ಪ್ರತಿ ಹೆಕ್ಟೇರಿಗೆ ಸರ್ಕಾರ ರೂ. 25,000/–ಗಳ ಪರಿಹಾರ ಧನವನ್ನು ಘೋಷಣೆ ಮಾಡಿರುತ್ತದೆ. ಅದರಂತೆ, ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರು ಇಂಡಿ ತಾಲ್ಲೂಕಿಗೆ ರೂ. 25.00 ಕೋಟಿ ಕಬ್ಬು ಬೆಳೆ ನಷ್ಟ ಪರಿಹಾರಧನವನ್ನು ಕೋರಿ ಪ್ರಸ್ತಾವನೆ ಸಲ್ಲಿಸಿರುವರು. ಈ ಪ್ರಸ್ತಾವನೆಯನ್ನು ಪರಿಶೀಲಿಸಿದಾಗ ಪರಿಹಾರಕ್ಕೆ ಅನರ್ಹರಾಗಿದ್ದ ಹಾಗೂ ದಾಖಲೆಗಳನ್ನು ತಿದ್ದಿ ತಪ್ಪು ಮಾಹಿತಿ ಒಳಗೊಂಡಿತ್ತು. ಇದಕ್ಕೆ

ಶ್ರೀ ಮಹದೇವಪ್ಪ ಸಾಸನೂರು, ತಹಶೀಲ್ದಾರ್, ಇಂಡಿ ಇವರು ಕಾರಣರಾಗಿರುವುದು ಸರ್ಕಾರಕ್ಕೆ ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ ಮೇಲೆ (1)ರಲ್ಲಿ ಓದಲಾದ ದಿನಾಂಕ 25–2–2008ರ ಆದೇಶದಲ್ಲಿ 1957ರ ಕ.ನಾ.ಸೇ. (ವ.ನಿ. ಮತ್ತು ಮೇ) ನಿಯಮಾವಳಿ ನಿಯಮ 10(1)(ಡಿ) ರನ್ವಯ ಇಲಾಖಾ ವಿಚಾರಣೆ ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ಮನವಿಗಳಲ್ಲಿ ಶ್ರೀ ಮಹದೇವಪ್ಪ ಸಾಸನೂರ ಇವರು ಅಮಾನತ್ತಿನಿಂದ ಮುಕ್ತಗೊಳಿಸಿ ಸೇವೆಗೆ ಪುನರ್‌ಸ್ಥಾಪಿಸುವಂತೆ ಕೋರಿರುತ್ತಾರೆ.

ಸರ್ಕಾರವು ಶ್ರೀ ಮಹದೇವಪ್ಪ ಸಾಸನೂರು, ಹಿಂದಿನ ತಹಶೀಲ್ದಾರ್, ಇಂಡಿ ಬಿಜಾಪುರ ಜಿಲ್ಲೆ ಇವರನ್ನು ಇಲಾಖಾ ವಿಚಾರಣೆ ಬಾಕಿ ಇರಿಸಿ ಅಮಾನತ್ತಿನಿಂದ ತೆರವುಗೊಳಿಸಿ ಸೇವೆಗೆ ಪುನರ್‌ಸ್ಥಾಪಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 3 ಎಡಿಇ 2008, ದಿನಾಂಕ: 4ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ಮಹದೇವಪ್ಪ ಸಾಸನೂರ, ಹಾಲಿ ಅಮಾನತ್ತಿನಲಿರುವ ಇವರನ್ನು 1957ರ ಕ.ನಾ.ಸೇ. (ವ.ನಿ. ಮತ್ತು ಮೇ) ನಿಯಮಾವಳಿ ನಿಯಮ 10(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಿಂದ ತೆರವುಗೊಳಿಸಿ ಬಿಜಾಪುರ ಜಿಲ್ಲೆ ಬಸವನಬಾಗೇವಾಡಿ ತಾ. ಇಲ್ಲಿ ಖಾಲಿ ಇರುವ ತಹಶೀಲ್ದಾರ್ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1025

**ಬಿ.ವಿ. ಚೌಕಿಮಠ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಕೆ.ಸಿ. ಕಾಳಿಂಗಪ್ಪ, 2ನೇ ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಲಯ, ಮೈಸೂರು, ಇವರ ಜನ್ಮ ದಿನಾಂಕವನ್ನು ಒಪ್ಪುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ: ಲಾ 229 ಪಿಪಿಇ 2003, ದಿನಾಂಕ:04.12.2003.
2. ಸದರಿ ಅಧಿಕಾರಿಯ ಮನವಿ ದಿನಾಂಕ: 28.02.2005.
3. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ ಕೇಂಸ/ವಿವ/23/2001–02, ದಿನಾಂಕ:31.05.2007.

**ಸರ್ಕಾರದ ಆದೇಶ ಸಂಖ್ಯೆ: ಒಇ 279 ಪಿಪಿಇ 2007, ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2008.**

ಮೇಲೆ ಓದಲಾದ (1)ರಲ್ಲಿ ಸರ್ಕಾರದ ಆದೇಶದ ಕ್ರ.ಸಂ:12ರಲ್ಲಿ ಸ'ಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ನೇಮಕಗೊಂಡ ಶ್ರೀ ಕೆ.ಸಿ. ಕಾಳಿಂಗಪ್ಪ, 2ನೇ ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಲಯ, ಮೈಸೂರು, ಇವರು ದಿನಾಂಕ: 05.12.2003ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ಎಸ್.ಎಸ್.ಎಲ್.ಸಿ ಮೂಲ ಅಂಕಪಟ್ಟಿಯಲ್ಲಿ ಇವರ ಜನ್ಮ ದಿನಾಂಕವನ್ನು 01.06.60 ಎಂದು ನಮೂಸಿದ್ದು, ಸದರಿ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) (ತಿದ್ದುಪಡಿ) ಕಾಯ್ದೆ 1982ರ ಕಲಂ3ರ ಉಪಕಲಂ–2ರ ಅನ್ವಯ ಶ್ರೀ ಕೆ.ಸಿ. ಕಾಳಿಂಗಪ್ಪ, ಇವರ **ಜನ್ಮ ದಿನಾಂಕ: 01.06.1960(ಒಂದು – ಜೂನ್ – ಸಾವಿರದೊಂಬೈನೂರ ಆರವತ್ತು)** ಎಂದು ಸರ್ಕಾರವು ಒಪ್ಪಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ

ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಪಿ.ಎಂ. ಪಾಟೀಲ್, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಳಗಾವಿ ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ–II ಸಂ: ಲಾ 161 ಪಿಪಿಇ 86, ದಿನಾಂಕ: 24.7.1989.
2. ಸರ್ಕಾರದ ಪತ್ರದ ಸಂ ಲಾ 294 ಪಿಪಿಇ 90, ದಿನಾಂಕ: 12.3.1991.

3. ಸದರಿ ಅಧಿಕಾರಿಯವರ ಮನವಿ ದಿನಾಂಕ 14.12.2007.
4. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಲೆಕ್ಕ–1/350/2007–08, ದಿನಾಂಕ: 7.3.2008.

**ಪ್ರಸ್ತಾವನೆ :**

1. ಶ್ರೀ ಪಿ.ಎಂ. ಪಾಟೀಲ್, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಳಗಾವಿ, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ 24–7–1989ರ ಕ್ರ.ಸಂ. 40ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ 7–8–1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

2. ಸದರಿ ಅಧಿಕಾರಿಯವರ ಜನ್ಮ ದಿನಾಂಕ 12–6–1954 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ 12–3–91ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

3. ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 12–6–1954 ಆಗಿದ್ದು, ಅವರು ದಿನಾಂಕ 7–8–1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಸದರಿಯವರು 35 ವರ್ಷ 2 ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇರಿದಂತೆ ಆಗಿರುತ್ತದೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷ ಮೀರಿದ ನಂತರ ಸರ್ಕಾರಿ ಸೇವೆಗೆ ಸೇರಿದ್ದು, ಸರ್ಕಾರಿ ಸೇವೆಗೆ ಸೇರಿದಾಗ ಆಗಿದ್ದ ವಯಸ್ಸು ಮತ್ತು 30 ವರ್ಷ ಇವೆರಡರ ವ್ಯತ್ಯಾಸದ ಅವಧಿಯನ್ನು ಗರಿಷ್ಠ 4 ವರ್ಷಗಳವರೆಗೆ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವಿರುತ್ತದೆ. ಆದ್ದರಿಂದ, ಸದರಿ ನಿಯಮದನ್ವಯ ನಿವೃತ್ತಿ ವೇತನಕ್ಕೆ 4 ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಆದೇಶಿಸುವಂತೆ ಮತ್ತು ಸದರಿ ಆದೇಶ ಪ್ರತಿಯನ್ನು ಮಹಾಲೇಖಪಾಲಕರಿಗೆ ಕಳುಹಿಸಿಕೊಡಬೇಕೆಂದು ಮನವಿಯಲ್ಲಿ ಕೋರಿರುತ್ತಾರೆ.

4. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆರವರು ಶ್ರೀ ಪಿ.ಎಂ. ಪಾಟೀಲ್, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪ ನಿರ್ದೇಶಕರ ಕಛೇರಿ, ಬೆಳಗಾವಿ, ಅವರು ದಿನಾಂಕ 7–8–1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಅವರ ಜನ್ಮ ದಿನಾಂಕ 12–6–1954 ಆಗಿರುತ್ತದೆ. ಸದರಿಯವರು ಅವರ 35 ವರ್ಷ 1 ತಿಂಗಳು 25 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆಗೆ ಶಿಫಾರಸ್ಸನ್ನು ಮಾಡಿರುತ್ತಾರೆ. ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಒಇ 126 ಪಿಪಿಇ 2008, ಬೆಂಗಳೂರು, ದಿನಾಂಕ 6ನೇ ಆಗಸ್ಟ್ 2008.**

ಶ್ರೀ ಪಿ.ಎಂ. ಪಾಟೀಲ್, ಸಹಾಯಕ ಅಭಿಯೋಗ ನಿರ್ದೇಶಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರೀತ್ಯ ಗರಿಷ್ಠ ಮಿತಿಯ ನಾಲ್ಕು ವರ್ಷಗಳ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 746 ವೆಚ್ಚ–7/2008, ದಿನಾಂಕ 23–7–2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1170

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ಉಪ ತಹಶೀಲ್ದಾರ್, ನಾಡಕಚೇರಿ, ಉತ್ತರಹಳ್ಳಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು (ಪ್ರಸ್ತುತ ತಹಶೀಲ್ದಾರ್, ದೇವನಹಳ್ಳಿ) ಮತ್ತು ಶ್ರೀ ಜೋಗಯ್ಯ, ಹಿಂದಿನ ಗ್ರಾಮಲೆಕ್ಕಿಗರು (ನಿವೃತ್ತರು), ಸಾರಕ್ಕಿ ವೃತ್ತ, ಬೆಂಗಳೂರು ದಕ್ಷಿಣ ತಾ. ಇವರ ವಿರುದ್ಧದ ಶಿಸ್ತು ಕ್ರಮದ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1. ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪ್ರಸ್ತಾವನೆ ಸಂಖ್ಯೆ: ಸಿಸಿಎ 13/ 2000–01, ದಿನಾಂಕ 12–7–2000.
2. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ ಆರ್‌ಡಿ 28 ಎಡಿಇ 2000, ದಿನಾಂಕ 19–12–2000.
3. ಶ್ರೀ ಬಿ. ಸಂಪತ್‌ಕುಮಾರ್, ತಹಶೀಲ್ದಾರ್ ಇವರ ರಕ್ಷಣಾ ಹೇಳಿಕೆ ದಿನಾಂಕ 12–2–2001.
4. ಶ್ರೀ ಜೋಗಯ್ಯ ಇವರ ರಕ್ಷಣಾ ಹೇಳಿಕೆ ದಿ: 4–2–2004.
5. ಸರ್ಕಾರದ ಆದೇಶ ಸಂಖ್ಯೆ: ಆರ್.ಡಿ. 28 ಎಡಿಇ 2000, ದಿನಾಂಕ 14–11–2005.
6. ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ 14–8–2006.
7. ಸರ್ಕಾರದ ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ ಆರ್‌ಡಿ 28 ಎಡಿಇ 2000, ದಿನಾಂಕ 19–1–2007.
8. ಶ್ರೀ ಬಿ. ಸಂಪತ್‌ಕುಮಾರ್ ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ 19–5–2008.
9. ಶ್ರೀ ಜೋಗಯ್ಯ, ಇವರ ಪ್ರತಿ ರಕ್ಷಣಾ ಹೇಳಿಕೆ ದಿ: 30–5–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ, ಬೆಂಗಳೂರು ಇವರ 12–7–2000ರಲ್ಲಿನ ಪ್ರಸ್ತಾವನೆಯಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕು ಉತ್ತರಹಳ್ಳಿ ಹೋಬಳಿ ಇಲ್ಲಿ 1995–96ನೇ ಸಾಲಿನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ಉಪತಹಶೀಲ್ದಾರ್ ಮತ್ತು ಶ್ರೀ ಬಿ. ಜೋಗಯ್ಯ, ಗ್ರಾಮಲೆಕ್ಕಿಗರು (ನಿವೃತ್ತರು) ಇವರುಗಳು ಉತ್ತರಹಳ್ಳಿ ಹೋಬಳಿಯ ಸಾರಕ್ಕಿ ಗ್ರಾಮದ ಸರ್ವೆ ಸಂಖ್ಯೆ 71ರ ಜಮೀನಿಗೆ ಸಂಬಂಧಿಸಿದಂತೆ ನಿಯಮಬಾಹಿರವಾಗಿ ಖಾತೆ ಮಾಡಿರುವ ಆಪಾದನೆಗೆ ಅವರುಗಳ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮಗಳನ್ವಯ ಶಿಸ್ತು ಕ್ರಮ ಕೈಗೊಳ್ಳುವಂತೆ ಕರಡು ದೋಷಾರೋಪಣಾ ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸುತ್ತಾ, ಈ ಪೈಕಿ ಶ್ರೀ ಜೋಗಯ್ಯ, ಗ್ರಾಮಲೆಕ್ಕಿಗರು ಇವರು ದಿನಾಂಕ 31–3–1998ರಂದು ವಯೋನಿವೃತ್ತಿ ಹೊಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರನ್ವಯ ಕ್ರಮ ಜರುಗಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ವಿಭಾಗಾಧಿಕಾರಿಗಳು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ಉಪತಹಶೀಲ್ದಾರ್, ನಾಡಕಚೇರಿ, ಉತ್ತರಹಳ್ಳಿ ಹೋಬಳಿ, ಬೆಂಗಳೂರು ದಕ್ಷಿಣ ತಾ. ಮತ್ತು ಶ್ರೀ ಜೋಗಯ್ಯ, ಹಿಂದಿನ ಗ್ರಾಮಲೆಕ್ಕಿಗರು, ಸಾರಕ್ಕಿ ವೃತ್ತ ಇವರುಗಳ ವಿರುದ್ಧ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ಮತ್ತು 13ರನ್ವಯ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಅವರುಗಳಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ 19–2–2000ರಲ್ಲಿ ಅನುಬಂಧ 1–4ರವರೆಗೆ ದೋಷಾರೋಪಣಾ ಪಟ್ಟಿಯನ್ನು ಒಳಗೊಂಡಂತೆ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಯಿತು. ಸದರಿ ನೋಟೀಸಿಗೆ ಆಪಾದಿತರುಗಳೆನ್ನಲಾದ ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ಉಪತಹಶೀಲ್ದಾರ್, ನಾಡಕಚೇರಿ, ಉತ್ತರಹಳ್ಳಿ ಹೋಬಳಿ, ಬೆಂಗಳೂರು ದಕ್ಷಿಣ ತಾ. ಮತ್ತು ಶ್ರೀ ಜೋಗಯ್ಯ, ಹಿಂದಿನ ಗ್ರಾಮಲೆಕ್ಕಿಗರು, ಸಾರಕ್ಕಿ ವೃತ್ತ ಇವರುಗಳು ಮೇಲೆ (3) ಮತ್ತು (4)ಗಳಲ್ಲಿ ಓದಲಾದ ದಿನಾಂಕಗಳಲ್ಲಿ ರಕ್ಷಣಾ ಹೇಳಿಕೆಗಳನ್ನು ಸಲ್ಲಿಸಿ ಆಪಾದನೆಗಳನ್ನು ಅಲ್ಲಗಳೆದಿರುತ್ತಾರೆ. ಇವರುಗಳು ನೀಡಿರುವ ರಕ್ಷಣಾ ಹೇಳಿಕೆಯನ್ನು ಪರಿಶೀಲಿಸಿ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಸರ್ಕಾರವು ಮೇಲೆ (5)ರಲ್ಲಿ ಓದಲಾದ ದಿನಾಂಕ 14–11–2005ರ ಆದೇಶದಲ್ಲಿ ಇಲಾಖಾ ವಿಚಾರಣೆ ಜರುಗಿಸಲು ನಿರ್ಧರಿಸಿ, ವಿಚಾರಣಾ ಪ್ರಾಧಿಕಾರಿಯನ್ನಾಗಿ ಶ್ರೀ ಡಿ.ಕೆ. ಕಣವಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ಹಾಗೂ ಬೆಂಗಳೂರು ನಗರದ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಿ ನಿಯಮಾನುಸಾರ ಇಲಾಖಾ ವಿಚಾರಣೆ ಜರುಗಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ತಿಳಿಸಲಾಗಿತ್ತು.

ವಿಚಾರಣಾ ಪ್ರಾಧಿಕಾರಿಗಳು ಮೇಲೆ (6)ರಲ್ಲಿ ಓದಲಾದ ದಿನಾಂಕ 14–8–2006ರಂದು ವಿಚಾರಣಾ ವರದಿಯನ್ನು ಸಲ್ಲಿಸಿ ಆಪಾದಿತ 1 ಮತ್ತು 2ನೇ ನೌಕರರ ಮೇಲೆ ಮಾಡಲಾದ ಎಲ್ಲಾ ಆಪಾದನೆಗಳು ಸಾಬೀತಾಗಿರುತ್ತದೆ ಎಂದು ವರದಿ

ನೀಡಿರುತ್ತಾರೆ. ವಿಚಾರಣಾ ವರದಿಯನ್ನು ಪರಿಶೀಲಿಸುವ ಮುನ್ನ ಆಪಾದಿತರುಗಳಿಗೆ ವಿಚಾರಣಾ ವರದಿಯೊಂದಿಗೆ ಮೇಲೆ (7)ರಲ್ಲಿ ಓದಲಾದ ದಿನಾಂಕ 19-1-2007ರಲ್ಲಿ ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಯಿತು. ಸದರಿ ಎರಡನೇ ಕಾರಣ ಕೇಳುವ ನೋಟೀಸಿನಲ್ಲಿ ಆಪಾದಿತ 1 ಆದ ಶ್ರೀ ಬಿ. ಸಂಪತ್‌ಕುಮಾರ್ ಇವರು ಮೇಲೆ (8)ರಲ್ಲಿ ಓದಲಾದ ದಿನಾಂಕ 19-5-2008ರ ಪ್ರತಿ ರಕ್ಷಣಾ ಹೇಳಿಕೆಯಲ್ಲಿ, ತಮ್ಮ ಮೇಲೆ ಮಾಡಲಾದ ಆಪಾದನೆಗೆ ಉದ್ದೇಶ ಪೂರ್ವಕವಾಗಿ ತಪ್ಪನ್ನು ಮಾಡಿಲ್ಲವೆಂದು, ಈ ಪ್ರಕರಣದಲ್ಲಿ ಗ್ರಾಮಲೆಕ್ಕಿಗರು ತಯಾರಿಸಿ ಸಲ್ಲಿಸಲಾದ ಪೌತಿ ತಃಖ್ತೆ ಕಡತ ಪರಿಶೀಲಿಸಿ ತಂದೆಯ ಹೆಸರಿಗಿದ್ದ ಖಾತೆಯನ್ನು ಮಗನ ಹೆಸರಿಗೆ ನಿಯಮಾವಳಿ ರೀತಿ ವರ್ಗಾವಣೆ ಮಾಡಲಾಗಿರುತ್ತದೆ. ವಿಚಾರಣಾ ಪ್ರಾಧಿಕಾರಿಗಳು 16 ಬಾರಿ ವಿಚಾರಣೆಯನ್ನು ಕರೆದಿದ್ದು, ವಿಚಾರಣಾ ಪ್ರಾಧಿಕಾರಿಗಳು ಒಬ್ಬ ಸಾಕ್ಷಿಯ ಹೇಳಿಕೆ ಪಡೆಯಲಾಗಿದೆ. ಸದರಿ ಸಾಕ್ಷಿಯು ಪಾಟೀ ಸವಾಲಿನಲ್ಲಿ ಕೇಳಿರುವ ಪ್ರಶ್ನೆಗೆ ಅವರ ಪರವಾಗಿ ಉತ್ತರಿಸಿರುವುದಾಗಿ ತಿಳಿಸುತ್ತಾ ವಿಚಾರಣಾಧಿಕಾರಿಗಳು ಯಾವುದೇ ದಾಖಲಾತಿಗಳನ್ನಾಗಲೀ, ಮೂಲ ಕಡತವನ್ನಾಗಲೀ ಪರಿಶೀಲಿಸದೆ ಏಕಪಕ್ಷೀಯವಾಗಿ ನಿರ್ಣಯಿಸಿರುವುದಾಗಿ ಆದ್ದರಿಂದ ಆಪಾದನೆಯಿಂದ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ. ಎರಡನೇ ಆಪಾದಿತರಾದ ಶ್ರೀ ಜೋಗಯ್ಯ ಇವರು ಮೇಲೆ (9)ರಲ್ಲಿ ಓದಲಾದ ದಿನಾಂಕ 30-5-2008ರ ಪ್ರತಿ ರಕ್ಷಣಾ ಹೇಳಿಕೆಯಲ್ಲಿ ಸದರಿ ಘಟನೆಯು 1995-96ನೇ ಸಾಲಿನದಾಗಿದ್ದು, ಇವರು ದಿನಾಂಕ 31-3-1998ರಂದು ಸೇವೆಯಿಂದ ವಯೋ ನಿವೃತ್ತರಾಗಿರುವುದಾಗಿ, ಇವರು ನಿವೃತ್ತಿ ನಂತರ ದೋಷಾರೋಪಣಾ ಪಟ್ಟಿ ಜಾರಿಯಾಗಿರುವುದಾಗಿ, ವಿಚಾರಣಾ ಸಮಯದಲ್ಲಿ ತಿಳಿಸಿದ್ದರೂ ಇದನ್ನು ಪರಿಗಣಿಸದೆ ಏಕಪಕ್ಷೀಯವಾಗಿ ನಿರ್ಧರಿಸಿ ಆಪಾದನೆ ಸಾಬೀತಾಗಿದೆಯೆಂದು ತಿಳಿಸಿರುತ್ತಾರೆ. ನಿಯಮಾವಳಿ ರೀತ್ಯಾ ನಿವೃತ್ತಿಯಾದ ನಂತರ ದೋಷಾರೋಪಣಾ ಪಟ್ಟಿ ಜಾರಿಯಾದ್ದರಿಂದ ಈ ಆಪಾದನೆಯಿಂದ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಸರ್ಕಾರವು ವಿಚಾರಣಾ ಪ್ರಾಧಿಕಾರಿಗಳ ವಿಚಾರಣಾ ವರದಿಯನ್ನು ಹಾಗೂ ಆಪಾದಿತರುಗಳ ಪ್ರತಿ ರಕ್ಷಣಾ ಹೇಳಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಆಪಾದನೆಯಿಂದ ಸರ್ಕಾರಕ್ಕೆ ಯಾವುದೇ ನಷ್ಟ ಉಂಟಾಗಿರುವುದು ಕಂಡುಬಂದಿರುವುದಿಲ್ಲ. ಆದರೂ ಆಪಾದಿತರು ಕರ್ತವ್ಯ ಲೋಪ ಎಸಗಿರುವುದು ಕಂಡುಬಂದಿದ್ದರಿಂದ ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ಉಪತಹಶೀಲ್ದಾರ್, ನಾಡಕಚೇರಿ, ಉತ್ತರಹಳ್ಳಿ ಹೋಬಳಿ, ಬೆಂಗಳೂರು ದಕ್ಷಿಣ ತಾ. (ಪ್ರಸ್ತುತ ತಹಶೀಲ್ದಾರ್, ದೇವನಹಳ್ಳಿ) ಇವರಿಗೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಹಾಗೂ ಶ್ರೀ ಜೋಗಯ್ಯ, ಹಿಂದಿನ ಗ್ರಾಮಲೆಕ್ಕಿಗ ಇವರು ಈಗಾಗಲೇ ಕರ್ನಾಟಕ ಲೋಕಾಯುಕ್ತ ಟ್ರಾಪ್ ಪ್ರಕರಣದಲ್ಲಿ ಸೇವೆಯಿಂದ ವಜಾಗೊಂಡಿರುವುದರಿಂದ ಇವರು ವಿರುದ್ಧದ ವಿಚಾರಣೆಯನ್ನು ಕೈಬಿಡಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 28 ಎಡಿಇ 2000, ದಿನಾಂಕ: 4ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಶ್ರೀ ಬಿ. ಸಂಪತ್‌ಕುಮಾರ್, ಹಿಂದಿನ ಉಪತಹಶೀಲ್ದಾರ್, ನಾಡಕಚೇರಿ, ಉತ್ತರಹಳ್ಳಿ ಹೋಬಳಿ, ಬೆಂಗಳೂರು ದಕ್ಷಿಣ ತಾಲ್ಲೂಕು ನಗರ ಜಿಲ್ಲೆ (ಪ್ರಸ್ತುತ ತಹಶೀಲ್ದಾರ್, ದೇವನಹಳ್ಳಿ) ಇವರಿಗೆ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 8 (iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅವರಿಗೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cummulative effect) ತಡೆಹಿಡಿಯುವ ದಂಡನೆಯನ್ನು ವಿಧಿಸಿದೆ. ಸದರಿ ದಂಡನಾವಧಿಯು ಮುಗಿದ ತರುವಾಯ ಅವರ ವಾರ್ಷಿಕ ವೇತನ ಬಡ್ತಿಗೆ ಯಾವುದೇ ಪರಿಣಾಮ ಬೀರುವುದಿಲ್ಲ. ಮತ್ತು ಶ್ರೀ ಜೋಗಯ್ಯ, ಹಿಂದಿನ ಗ್ರಾಮಲೆಕ್ಕಿಗ ಇವರು ಈಗಾಗಲೇ ಕರ್ನಾಟಕ ಲೋಕಾಯುಕ್ತ ಟ್ರಾಪ್ ಪ್ರಕರಣದಲ್ಲಿ ಸೇವೆಯಿಂದ ವಜಾಗೊಂಡಿರುವುದರಿಂದ ಇವರ ವಿರುದ್ಧ ಈ ಆಪಾದನೆಯಿಂದ ಕೈಬಿಡಲು ನಿರ್ಧರಿಸಿದೆ.

ಸದರಿ ಅವಧಿಯಲ್ಲಿ ಶ್ರೀ ಬಿ. ಸಂಪತ್‌ಕುಮಾರ್ ಅವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತಿನ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1034

**ಬಿ.ವಿ. ಚೌಕಿಮಠ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹೆಚ್.ಎನ್. ಮಹಾಬಳೇಶ್ವರಪ್ಪ, ಪಿ.ಐ., ಸಿ.ಸಿ.ಆರ್.ಬಿ. ಹುಬ್ಬಳ್ಳಿ-ಧಾರವಾಡ ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಕಮೀಷನರ್, ಹುಬ್ಬಳ್ಳಿ-ಧಾರವಾಡ ಇವರ ಆದೇಶ ಸಂಖ್ಯೆ: ಸಿಪಿ: ಸಿಬ್ಬಂದಿ: 3: ನಿಯಮ: 07/74: 2006-07, ದಿನಾಂಕ 30-12-2006.

2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು, ಇವರ ಆದೇಶ ಸಂಖ್ಯೆ ಸಿಬಿ: 8: 49: 07–08, ದಿ: 22–8–2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 5–10–2007.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ ಸಿಬಿ: 8: 49: 06–07, ದಿನಾಂಕ 28–12–2007.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: PSC 303: CNS 2007, ದಿನಾಂಕ 13–5–2008.

**ಪ್ರಸ್ತಾವನೆ :**

ಶ್ರೀ ಹೆಚ್.ಎನ್. ಮಹಾಬಳೇಶ್ವರಪ್ಪ, ಪಿ.ಐ., ಸಿ.ಸಿ.ಆರ್.ಬಿ. ಹುಬ್ಬಳ್ಳಿ–ಧಾರವಾಡ ನಗರ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

ಶ್ರೀ ಹೆಚ್.ಎನ್. ಮಹಾಬಳೇಶ್ವರಪ್ಪ, ಪಿ.ಐ., ಸಿ.ಸಿ.ಆರ್.ಬಿ. ಹುಬ್ಬಳ್ಳಿ–ಧಾರವಾಡ ನಗರ ಇವರು ದಿನಾಂಕ 26–10–2006ರಂದು ವಿದ್ಯಾನಗರ ಪೊಲೀಸ್ ಠಾಣೆಯ ವ್ಯಾಪ್ತಿಯ ಹೊಸೂರದಲ್ಲಿರುವ ಮಂಗಳೂರು ಲಾಡ್ಜಿನಲ್ಲಿ ವೇಶ್ಯಾವಾಟಿಕೆ ನಡೆಯುತ್ತಿರುವ ಬಗ್ಗೆ ಖಚಿತ ಮಾಹಿತಿ ಬಂದ ಮೇರೆಗೆ ನಿಮ್ಮ ಮೇಲಾಧಿಕಾರಿಗಳು ಲಾಡ್ಜ್‌ಗೆ ತೆರಳಿ ದಾಳಿ ಮಾಡಲಾಗಿ ಲಾಡ್ಜ್‌ನ ಮ್ಯಾನೇಜರ್ ವೇಶ್ಯಾವಾಟಿಕೆ ನಡೆಸುತ್ತಿದ್ದು, ಈ ಬಗ್ಗೆ ಮಹಿಳಾ ಪೊಲೀಸ್ ಠಾಣೆ ಹುಬ್ಬಳ್ಳಿಯಲ್ಲಿ ಗುನ್ನಾ ನಂ: 51/06 ಕಲಂ 3(1), 7(1), 5(1), 8(ಎ) ಪಿ.ಐ.ಟಿ. ಕಾಯ್ದೆ ಅಡಿಯಲ್ಲಿ 05 ಜನ ಆರೋಪಿತರ ಮೇಲೆ ಪ್ರಕರಣ ದಾಖಲಾಗಿರುತ್ತದೆ. ಅಲ್ಲದೇ ದಿನಾಂಕ 1–11–06 ರಂದು ವಿದ್ಯಾನಗರ ಪೊಲೀಸ್ ಠಾಣೆಯ ವ್ಯಾಪ್ತಿಯ ಸತ್ಕಾರ ಲಾಡ್ಜ್‌ನಲ್ಲಿ ವೇಶ್ಯಾವಾಟಿಕೆ ನಡೆಯುತ್ತಿರುವ ಬಗ್ಗೆ ಖಚಿತ ಮಾಹಿತಿ ಬಂದ ಮೇರೆಗೆ ನಿಮ್ಮ ಮೇಲಾಧಿಕಾರಿಗಳು ಅಧಿಕಾರಿಗಳೊಂದಿಗೆ ದಾಳಿ ನಡೆಸಿದ್ದು, ಈ ಬಗ್ಗೆ ಮಹಿಳಾ ಪೊಲೀಸ್ ಠಾಣೆಯಲ್ಲಿ ಗುನ್ನಾ ನಂ. 53/06 ಕಲಂ 3(1), 4(1), 5(1), 8(ಎ) ಪಿ.ಐ.ಟಿ. ಕಾಯ್ದೆ ಅಡಿಯಲ್ಲಿ ಪ್ರಕರಣ ದಾಖಲಾಗಿರುತ್ತದೆ. ಈ ಪ್ರಕರಣಗಳನ್ನು ಗಮನಿಸಿದಾಗ ನೀವು ನಿಮ್ಮ ಠಾಣೆಯ ವ್ಯಾಪ್ತಿಯಲ್ಲಿ ಕಾನೂನು ಬಾಹಿರ ಚಟುವಟಿಕೆಗಳನ್ನು ತಡೆಗಟ್ಟಲು ಸಂಪೂರ್ಣವಾಗಿ ವಿಫಲರಾಗಿರುವುದು ಕಂಡು ಬಂದಿರುತ್ತದೆ. ಈ ರೀತಿ ನೀವು ನಿಮ್ಮ ಮೇಲಾಧಿಕಾರಿಗಳು ನೀಡಿದ ಸಲಹೆ ಸೂಚನೆಗಳನ್ನು ಸರಿಯಾಗಿ ಪಾಲಿಸಿ ಕಾನೂನು ಬಾಹಿರ ಚಟುವಟಿಕೆಗಳನ್ನು ತಡೆಗಟ್ಟದೆ ಮೇಲಾಧಿಕಾರಿಗಳ ಆದೇಶದ ಬಗ್ಗೆ ತಾತ್ಸಾರ ಮನೋಭಾವನೆಯನ್ನು ತೋರ್ಪಡಿಸಿ, ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ ಪ್ರದರ್ಶಿಸಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಕಮೀಷನರ್, ಹುಬ್ಬಳ್ಳಿ–ಧಾರವಾಡ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ 30–12–2006ರ ಆದೇಶದಲ್ಲಿ ಅರ್ಜಿದಾರರಿಗೆ ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 22–8–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿಯವರು ದಿ: 26–10–2006ರಂದು ಕೊಪ್ಪಳಕ್ಕೆ ಸಾಕ್ಷಿ ನುಡಿಯಲು ಹೋಗಿರುವುದು ದೃಢಪಡುತ್ತದೆ. ಸದರಿಯವರು ಕೇಂದ್ರ ಸ್ಥಾನದಲ್ಲಿ ಮಹಿಳಾ ಪೊಲೀಸ್ ಠಾಣೆಗೆ ಮಾಹಿತಿ ನೀಡಿದ್ದು, ಅವರು ಧಾಳಿ ನಡೆಸಿರುತ್ತಾರೆ. ಇದರಲ್ಲಿ ಇವರು ಕರ್ತವ್ಯಲೋಪ ಎಸಗಿರುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಅದಾಗ್ಯೂ ತಮ್ಮ ವ್ಯಾಪ್ತಿ ಪ್ರದೇಶದಲ್ಲಿ ಕಾನೂನು ಬಾಹಿರ ಚಟುವಟಿಕೆಗಳನ್ನು ನಿಯಂತ್ರಿಸುವುದು ಇವರ ಕರ್ತವ್ಯವಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ ಇವರಿಗೆ 'ಎಚ್ಚರಿಕೆ' ನೀಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 13 ಪೊಸಿಅ 2008, ಬೆಂಗಳೂರು, ದಿನಾಂಕ: 18ನೇ ಜೂನ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೆಚ್.ಎನ್. ಮಹಾಬಳೇಶ್ವರಪ್ಪ, ಪಿ.ಐ., ಸಿ.ಸಿ.ಆರ್.ಬಿ. ಹುಬ್ಬಳ್ಳಿ–ಧಾರವಾಡ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಮಾರ್ಪಡಿಸಿ ಇವರಿಗೆ ಎಚ್ಚರಿಕೆ ನೀಡಿ ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕಸೇವಾ ಆಯೋಗದ ಪತ್ರದ ಪತ್ರ ಸಂಖ್ಯೆ PSC 303 CNS 2007, ದಿನಾಂಕ 13–5–2008ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.991

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಕಂದಾಯ ಸಚಿವಾಲಯ**

**ವಿಷಯ :** ಮಾನ್ಯ ಕಂದಾಯ ಸಚಿವರು ದಿನಾಂಕ 21–6–2008ರಂದು ಹರಪನಹಳ್ಳಿ ತಾಲ್ಲೂಕು ಕಛೇರಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಸಾರ್ವಜನಿಕರಿಂದ ಬಂದಿರುವ ದೂರುಗಳ ಹಾಗೂ ನ್ಯೂನ್ಯತೆಗಳ ಬಗ್ಗೆ.

**ಓದಲಾಗಿದೆ:** 1. ಉಪ ವಿಭಾಗಾಧಿಕಾರಿಗಳ ಕಾರ್ಯಾಲಯ, ಹರಪನಹಳ್ಳಿ ಉಪ ವಿಭಾಗ, ಹರಪನಹಳ್ಳಿ ಇವರ ಪತ್ರ ಸಂಖ್ಯೆ ಸಿಬ್ಬಂದಿ/ವಿವ/46/2008–09, ದಿನಾಂಕ 21–6–2008.

2. ಜಿಲ್ಲಾಧಿಕಾರಿಗಳ ವರದಿ ದಿನಾಂಕ 21–6–2008.

**ಪ್ರಸ್ತಾವನೆ :**

ದಿನಾಂಕ 21–6–2008ರಂದು ಮಾನ್ಯ ಕಂದಾಯ ಸಚಿವರು ಹರಪನಹಳ್ಳಿ ತಾಲ್ಲೂಕು ಕಛೇರಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಸಾರ್ವಜನಿಕರಿಂದ ಬಂದಿರುವ ದೂರುಗಳ ಹಿನ್ನೆಲೆಯಲ್ಲಿ ತಹಶೀಲ್ದಾರ್ ಕಚೇರಿಯನ್ನು ತಪಾಸಣೆ ನಡೆಸಿದ್ದು, ತಪಾಸಣೆ ಸಮಯದಲ್ಲಿ ಈ ಕೆಳಕಂಡ ನ್ಯೂನ್ಯತೆಗಳು ಕಂಡುಬಂದಿರುವುದಾಗಿ ಉಪ ವಿಭಾಗಾಧಿಕಾರಿಗಳು, ಹರಪನಹಳ್ಳಿ ಇವರು ಜಿಲ್ಲಾಧಿಕಾರಿಗಳಿಗೆ ವರದಿ ಮಾಡಿರುತ್ತಾರೆ.

1. ಕಛೇರಿ ಹಾಜರಾತಿ ವಹಿಯಲ್ಲಿ ಶ್ರೀ ಉಮೇಶ್‌ಬಾಬು, ಬೆರಳಚ್ಚುಗಾರರು ಇವರು ಜೂನ್ ಮಾಹೆಯಲ್ಲಿ 5–6–2008 ರಿಂದ 11–6–2008ರವರೆಗೆ ಹಾಗೂ ದಿನಾಂಕ 19–6–2008 ರಿಂದ 21–6–2008ರವರೆಗೆ ಗೈರು ಹಾಜರಾಗಿರುತ್ತಾರೆ. ಸದರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಲಂಬನೆಯಲ್ಲಿರಿಸಲು ಮಾನ್ಯ ಸಚಿವರು ಆದೇಶಿಸಿರುತ್ತಾರೆ.
2. ಶ್ರೀಮತಿ ಷಹನಾಜ್‌ಬೇಗಂ ರವರು ದಿನಾಂಕ 20–6–2008 ಮತ್ತು 21–6–2008ರಂದು ಗೈರು ಹಾಜರಾಗಿರುತ್ತಾರೆ. ಅದಲ್ಲದೇ ಸದರಿ ನೌಕರರು ಸಂಧ್ಯಾ ಸುರಕ್ಷಾ ಯೋಜನೆಗೆ ಸಂಬಂಧಿಸಿದ ವಿಷಯ ವಹಿಯನ್ನು ಅಸಮರ್ಪಕವಾಗಿ ನಿರ್ವಹಿಸಿರುತ್ತಾರೆ. ಮಂಜೂರಾದ ಫಲಾನುಭವಿಗಳ ವಿವರಗಳನ್ನು ಸಮರ್ಪಕವಾಗಿ ನಿರ್ವಹಿಸಿರುವುದಿಲ್ಲ.
3. ಶ್ರೀ ಲಕ್ಷ್ಮಿಕಾಂತ, ದ್ವಿ.ದ.ಸ. ಇವರು ಎನ್.ಎಸ್.ಎ.ಪಿ. ಯೋಜನೆಯಡಿ 20 ಫಲಾನುಭವಿಗಳಿಗೆ ದಿನಾಂಕ 4–2–2008ರಂದೇ ಚೆಕ್‌ಗಳು ತಯಾರಾಗಿದ್ದರೂ ಈವರೆಗೂ ಸದರಿ ಚೆಕ್ಕುಗಳನ್ನು ಸಂಬಂಧಿತ ಫಲಾನುಭವಿಗಳಿಗೆ ವಿತರಿಸಲು ಕ್ರಮ ವಹಿಸಿರುವುದಿಲ್ಲ.
4. ಶ್ರೀ ಹನುಮಂತಪ್ಪ ಪ್ರ.ದ.ಸ. ಅವರು ವಿವಿಧ ವೇತನಗಳಾದ ಓ.ಎ.ಪಿ., ಪಿ.ಹೆಚ್.ಪಿ., ಡ.ಬ್ಲ್ಯೂ.ಪಿ. ವಿಷಯ ವಹಿಗಳನ್ನು ಸಮರ್ಪಕವಾಗಿ ನಿರ್ವಹಿಸಿರುವುದಿಲ್ಲ. ಬಾಕಿ ಪ್ರಕರಣಗಳ ವಿವರವನ್ನು ತಪ್ಪಾಗಿ ಮಾನ್ಯ ಕಂದಾಯ ಸಚಿವರಿಗೆ ನೀಡಿರುತ್ತಾರೆ. ವಿಷಯ ವಹಿಗಳಲ್ಲಿ ಮಾಸಿಕ ಘೋಷ್ವಾರೆ ಹಾಕಿ ದೃಢೀಕರಿಸಿರುವುದಿಲ್ಲ.
5. ಶ್ರೀ ಯಮನಪ್ಪ ಕಲ್ಲುಕುಟಿಗರ್, ರಾಜಸ್ವ ನಿರೀಕ್ಷಕರು, ಕಸಬಾ ಇವರು ವಿವಿಧ ವೇತನಗಳ ಪ್ರಕರಣಗಳ ವಿಲೇವಾರಿಯಲ್ಲಿ ಫೆಬ್ರವರಿ 2008ರಿಂದಲೂ ಹಲವಾರು ಪ್ರಕರಣಗಳನ್ನು ಅನಾವಶ್ಯಕವಾಗಿ ಬಾಕಿ ಇರಿಸಿಕೊಂಡಿರುತ್ತಾರೆ.
6. ಭೂಮಾಪನ ಪೋಡಿ ಪ್ರಕರಣಗಳಲ್ಲಿ ಹಲವಾರು ಪ್ರಕರಣಗಳು 2006–07ನೇ ಸಾಲಿನಿಂದಲೂ ಬಾಕಿ ಇರುವುದನ್ನು ಗಮನಿಸಿರುತ್ತಾರೆ.

7. ಡಿ ಗ್ರೂಪ್ ನೌಕರರು ನಿಗಧಿತ ಸಮವಸ್ತ್ರವನ್ನು ಧರಿಸದೇ ಇರುವುದನ್ನು ಗಮನಿಸಿರುತ್ತಾರೆ. ಇನ್ನು ಮುಂದೆ ಕಡ್ಡಾಯವಾಗಿ ನಿಗಧಿತ ಸಮವಸ್ತ್ರವನ್ನು ಕಡ್ಡಾಯವಾಗಿ ಧರಿಸಿಕೊಂಡು ಕಛೇರಿ ಕರ್ತವ್ಯ ನಿರ್ವಹಿಸಲು ಸೂಚಿಸಿರುತ್ತಾರೆ.
8. ಶ್ರೀ ಕೇಶವಮೂರ್ತಿ, ಉಪ ತಹಶೀಲ್ದಾರ್ ನಾಡ ಕಛೇರಿ, ಚಿಗಟೇರಿ ಇವರು ಈ ಹಿಂದೆ ತಾಲ್ಲೂಕು ಶಿರಸ್ತೇದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಓ.ಎ.ಪಿ., ಪಿ.ಹೆಚ್.ಪಿ., ಡಿ.ಡಬ್ಲ್ಯೂ.ಪಿ. ಸಂಧ್ಯಾ ಸುರಕ್ಷಾ ಯೋಜನೆಗಳ ಕಡತಗಳಲ್ಲಿ ಅನಾವಶ್ಯಕ ಟಿಪ್ಪಣಿಗಳನ್ನು ಮಂಡಿಸಿ ಫಲಾನುಭವಿಗಳಿಗೆ ಪರಿಹಾರಧನ ವಿತರಿಸುವಲ್ಲಿ ವಿಳಂಬಕ್ಕೆ ಕಾರಣರಾಗಿರುತ್ತಾರೆ.
9. ಆಹಾರ ಶಿರಸ್ತೇದಾರರು ಮುಂಗಡ ಪ್ರವಾಸ ಕಾರ್ಯಕ್ರಮ ಪಟ್ಟಿಗಳನ್ನು ಕಛೇರಿಗೆ ಸಲ್ಲಿಸುತ್ತಿರುವುದಿಲ್ಲ. ಅಲ್ಲದೇ ಆಹಾರ ಧಾನ್ಯಗಳ ಸಮರ್ಪಕ ಎತ್ತುವಳಿ ಮತ್ತು ಹಂಚಿಕೆ ಬಗ್ಗೆ ಅಗತ್ಯ ಕ್ರಮ ವಹಿಸಿರುವುದಿಲ್ಲ.
10. ತಾಲ್ಲೂಕು ಕಛೇರಿ "ಭೂಮಿ" ಗಣಕೀಕರಣ ಕೇಂದ್ರದಲ್ಲಿ ಸಿವಿಲ್ ಕೋರ್ಟ್ ಆದೇಶದ ಪ್ರಕರಣಗಳನ್ನು ಜನವರಿ 2008ರಿಂದ ದಾಖಲಿಸಿಕೊಳ್ಳದೇ ಹಾಗೆಯೇ ಬಾಕಿ ಉಳಿಸಿಕೊಂಡಿರುತ್ತಾರೆ. ಈ ಬಗ್ಗೆ ಆರ್.ಆರ್. ಶಿರಸ್ತೇದಾರ್ ಹಾಗೂ ತಹಶೀಲ್ದಾರರು ಕರ್ತವ್ಯಲೋಪವೆಸಗಿರುತ್ತಾರೆ.
11. ಹಾಗೂ ಗುಲ್ಬರ್ಗ ಪ್ರಾದೇಶಿಕ ಆಯುಕ್ತರ ಕಛೇರಿಗೆ ನಾಲ್ವರು ಸಿಬ್ಬಂದಿಯನ್ನು ತಹಶೀಲ್ದಾರರು ಕರೆದುಕೊಂಡು ಹೋಗಿದ್ದು, ಈ ಬಗ್ಗೆ ಕಛೇರಿಯಲ್ಲಿ ಯಾರಿಗೂ ಪ್ರಭಾರ ವಹಿಸಿಕೊಟ್ಟು ತೆರಳಿರುವುದಿಲ್ಲ.

ತಹಶೀಲ್ದಾರ್ ಹರಪನಹಳ್ಳಿ ತಾಲ್ಲೂಕು ಇವರು ಆಡಳಿತವನ್ನು ಪರಿಣಾಮಕಾರಿಯಾಗಿ ಮತ್ತು ಸಮರ್ಪಕವಾಗಿ ನಿರ್ವಹಿಸದೇ ಇರುವುದು, ಈ ಮೇಲಿನ ನ್ಯೂನ್ಯತೆಗಳಿಂದ ಕಂಡುಬಂದಿದ್ದು ಅಲ್ಲದೆ ಸದರಿಯವರು ಸರ್ಕಾರದ ಯೋಜನೆಗಳನ್ನು ಸಾರ್ವಜನಿಕರಿಗೆ ತಲುಪಿಸುವಲ್ಲಿ ಸಹ ವಿಫಲರಾಗಿದ್ದಾರೆಂದು ತಿಳಿಸಿ ಸದರಿಯವರ ಮೇಲೆ ಶಿಸ್ತು ಕ್ರಮ ಜರುಗಿಸಲು ಉಪ ವಿಭಾಗಾಧಿಕಾರಿಗಳು ಜಿಲ್ಲಾಧಿಕಾರಿಗಳಿಗೆ ಶಿಫಾರಸ್ಸು ಮಾಡಿರುತ್ತಾರೆ.

ಜಿಲ್ಲಾಧಿಕಾರಿಗಳು ದಾವಣಗೆರೆ ದಿನಾಂಕ 21–6–2008ರಂದು ಸರ್ಕಾರಕ್ಕೆ ಪತ್ರ ಬರೆದು ಉಪ ವಿಭಾಗಾಧಿಕಾರಿಗಳು, ಹರಪನಹಳ್ಳಿ ಇವರು ಹರಪನಹಳ್ಳಿ ತಾಲ್ಲುಕು ತಹಶೀಲ್ದಾರ್ ಕಛೇರಿಯಲ್ಲಿ ಕಂಡುಬಂದಿರುವ ನ್ಯೂನ್ಯತೆಗಳ ವರದಿಯ ಮೇಲೆ ಬೆರಳಚ್ಚುಗಾರ ಶ್ರೀ ಉಮೇಶಬಾಬು, ತಾಲ್ಲೂಕು ಕಛೇರಿ ಹರಪನಹಳ್ಳಿ ಇವರ ಅನಧಿಕೃತ ಗೈರು ಹಾಜರಿ ಬಗ್ಗೆ ದಿನಾಂಕ 21–6–2008ರಿಂದ ಜಾರಿಗೆ ಬರುವಂತೆ ಅಮಾನತ್ತಿನಲ್ಲಿಟ್ಟು ಆದೇಶಿಸಲಾಗಿದೆಯೆಂದು ಹಾಗೂ ಶ್ರೀ ಎ. ಕೊಟ್ರಪ್ಪ ತಹಶೀಲ್ದಾರ್ ಹರಪನಹಳ್ಳಿ ಇವರು ದಿನಾಂಕ 30–6–2008ರಂದು ವಯೋನಿವೃತ್ತಿ ಹೊಂದಲಿದ್ದು ಇವರ ಅಸಮರ್ಪಕ ಕಾರ್ಯನಿರ್ವಹಣೆಯ ಬಗ್ಗೆ ನಿಯಮಾನುಸಾರ ಮುಂದಿನ ಕ್ರಮದ ಬಗ್ಗೆ ಸರ್ಕಾರದ ಆದೇಶವಾಗಬಹುದಾಗಿದೆಯೆಂದು ವರದಿ ಮಾಡಿರುತ್ತಾರೆ.

ಉಪ ವಿಭಾಗಾಧಿಕಾರಿಗಳ ಹಾಗೂ ಜಿಲ್ಲಾಧಿಕಾರಿಗಳ ವರದಿಯನ್ನು ಪರಿಶೀಲಿಸಲಾಗಿ ತಹಶೀಲ್ದಾರ್ ಹರಪನಹಳ್ಳಿ ತಾಲ್ಲೂಕು ಶ್ರೀ ಎ. ಕೊಟ್ರಪ್ಪ ಇವರು ಕಛೇರಿಯ ಆಡಳಿತವನ್ನು ಪರಿಣಾಮಕಾರಿಯಾಗಿ ಹಾಗೂ ಸಮರ್ಪಕವಾಗಿ ನಿರ್ವಹಿಸದೇ ಇರುವುದು ಅಲ್ಲದೆ ಸರ್ಕಾರದ ಯೋಜನೆಗಳನ್ನು ಸಾರ್ವಜನಿಕರಿಗೆ ತಲುಪಿಸುವಲ್ಲಿ ವಿಫಲರಾಗಿ ಕರ್ತವ್ಯಚ್ಯುತಿ ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ. ಆದುದರಿಂದ ಸದರಿಯವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಕಂಇ 25 ಎಡಿಇ 2008, ಬೆಂಗಳೂರು, ದಿನಾಂಕ: 21ನೇ ಜೂನ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಎ. ಕೊಟ್ರಪ್ಪ, ತಹಶೀಲ್ದಾರ್ ಹರಪನಹಳ್ಳಿ ತಾಲ್ಲೂಕು ಇವರ ವಿರುದ್ಧದ ಶಿಸ್ತು ಕ್ರಮ ಬಾಕಿಯಿರಿಸಿ ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳು 1957ರ ನಿಯಮ 10ರನ್ವಯ ಅವರನ್ನು ಈ ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಲ್ಲಿ ಇರಿಸಿ ಆದೇಶಿಸಲಾಗಿದೆ.

ಸದರಿ ಅಧಿಕಾರಿಗಳು ನಿಯಮಾನುಸಾರ ನಿರ್ವಹಣಾ ಭತ್ಯೆ (Subsistence allowance) ಪಡೆಯಲು ಅರ್ಹರಾಗಿರುತ್ತಾರೆ.

ಜಿಲ್ಲಾಧಿಕಾರಿಗಳ ಪೂರ್ವಾನುಮತಿಯಿಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1031

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಸೇವೆಗಳು–3)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಯೋಜನೆ ಮತ್ತು ಯೋಜನೇತರ ಹುದ್ದೆಗಳನ್ನು ದಿನಾಂಕ 1–4–2008ರಿಂದ 31–3–2009ರವರೆಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 67 ಕೆಎಂಯು 2007, ದಿನಾಂಕ 7–5–2007.

2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ಇವರ ಪತ್ರ ಸಂಖ್ಯೆ: ಡಿಎಎಂ: ಇಎಸ್‌ಟಿ: 1: ಕ.ಸಂಖ್ಯೆ: 338: 2007–08/272, ದಿ: 21–2–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 7–5–2007ರ ಸರ್ಕಾರಿ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಯೋಜನೇತರ 26 ಹುದ್ದೆಗಳು ಹಾಗೂ ಯೋಜನೆಯ 7 ಹುದ್ದೆಗಳು ಸೇರಿದಂತೆ ಒಟ್ಟು 33 ಹುದ್ದೆಗಳನ್ನು ದಿನಾಂಕ 31–3–2008ರವರೆಗೆ ಮುಂದುವರೆಸಲಾಗಿತ್ತು.

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ 21–2–2008ರ ಪತ್ರದಲ್ಲಿ ಉಲ್ಲೇಖಿತ ಸರ್ಕಾರದ ಆದೇಶದನ್ವಯ ತಾತ್ಕಾಲಿಕ ಯೋಜನೇತರ 26 ಹುದ್ದೆಗಳು ಹಾಗೂ ಕಮಿಟೆಡ್ ಯೋಜನೇತರ 7 ಹುದ್ದೆಗಳು ಸೇರಿದಂತೆ ಒಟ್ಟಾರೆ 33 ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದ್ದು, ಸದರಿ ಹುದ್ದೆಗಳ ಮುಂದುವರಿಕೆ ಆದೇಶವು ದಿನಾಂಕ 31–3–2008ಕ್ಕೆ ಅಂತ್ಯಗೊಳ್ಳಲಿದೆ ಎಂದು ತಿಳಿಸಿ, ಕಮಿಟೆಡ್ ಯೋಜನೇತರ 7 ಹುದ್ದೆಗಳು ಹಾಗೂ ತಾತ್ಕಾಲಿಕ ಯೋಜನೇತರ 26 ಹುದ್ದೆಗಳು ಸೇರಿದಂತೆ ಒಟ್ಟಾರೆ 33 ಹುದ್ದೆಗಳನ್ನು ದಿನಾಂಕ 1–4–2008 ರಿಂದ 31–3–2009ರವರೆಗಿನ ಅವಧಿಗೆ ಮುಂದುವರಿಸಿ ಅಧಿಕಾರಿ ಹಾಗೂ ಸಿಬ್ಬಂದಿಗಳ ವೇತನ ಪಾವತಿಸಲು ಅನುವಾಗುವಂತೆ ಮುಂದುವರಿಕೆ ಆದೇಶ ಹೊರಡಿಸಲು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 77 ಕೆಎಂಯು 2008, ಬೆಂಗಳೂರು, ದಿನಾಂಕ: 17ನೇ ಜುಲೈ 2008.**

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಅವರು ಪ್ರಸ್ತಾವನೆಯಲ್ಲಿ ಕೋರಿರುವಂತೆ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ಈ ಕೆಳಕಂಡ ಒಟ್ಟು 33 ಹುದ್ದೆಗಳನ್ನು ದಿನಾಂಕ 1–4–2008ರಿಂದ 31–3–2009ರವರೆಗೆ ಒಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಿದೆ.

1. ಲೆಕ್ಕಶೀರ್ಷಿಕೆ 2205–00–103–0–01 (ಕಮಿಟೆಡ್ ನಾನ್‌ಪ್ಲಾನ್)
   1. ಉಪನಿರ್ದೇಶಕರು – 1
   2. ಪುರಾತತ್ವ ಸಹಾಯಕರು – 2
   3. ಅಟೆಂಡರ್ – 1

   – 4 ಹುದ್ದೆಗಳು
2. ಲೆಕ್ಕಶೀರ್ಷಿಕೆ 2205–00–107–0–01 (ಕಮಿಟೆಡ್ ನಾನ್‌ಪ್ಲಾನ್)
   1. ಕ್ಯುರೇಟರ್ – 3 ಹುದ್ದೆಗಳು

   ಒಟ್ಟು ಕಮಿಟೆಡ್ ನಾನ್‌ಪ್ಲಾನ್ – 7 ಹುದ್ದೆಗಳು
3. ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ) (ತಾತ್ಕಾಲಿಕ)
   1. ಸಹಾಯಕ ನಿರ್ದೇಶಕರು – 1
      (ವಸ್ತು ಸಂಗ್ರಹಾಲಯಗಳ ಅಭಿವೃದ್ಧಿ)
   2. ಪುರಾತತ್ವ ಸಹಾಯಕರು – 1
   3. ಮಾನ್ಯುಮೆಂಟ್ ಅಟೆಂಡೆಂಟ್ಸ್ – 5

   – 7 ಹುದ್ದೆಗಳು
4. ಲೆಕ್ಕಶೀರ್ಷಿಕೆ 2205–00–107–0–01 (ಯೋಜನೇತರ) (ತಾತ್ಕಾಲಿಕ)
   1. ಕ್ಯುರೇಟರ್ – 2
   2. ದ್ವಿತೀಯ ದರ್ಜೆ ಸಹಾಯಕರು – 5
   3. ಅಟೆಂಡರ್ – 1
   4. ಗ್ರೂಪ್–ಡಿ – 8

| | | |
|---|---|---|
| 5. | ಪ್ಯೂನ್ | – 2 |
| 6. | ರಾತ್ರಿ ಕಾವಲುಗಾರ | – 1 |
| | | – 19 ಹುದ್ದೆಗಳು |
| | ಒಟ್ಟು ಯೋಜನೇತರ (ತಾತ್ಕಾಲಿಕ) | 26 ಹುದ್ದೆಗಳು |

**ಘೋಷ್ವಾರೆ**

| | | |
|---|---|---|
| 1. | ಕಮಿಟೆಡ್ ಯೋಜನೇತರ ಹುದ್ದೆಗಳು | – 7 |
| 2. | ತಾತ್ಕಾಲಿಕ ಯೋಜನೇತರ ಹುದ್ದೆಗಳು | – 26 |
| | ಒಟ್ಟು ಹುದ್ದೆಗಳು | – 33 |

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಇಡಿ 672 ಐಎಫ್(ಬಿಎ) 2008, ದಿನಾಂಕ 27–6–2007ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1098

**ಎಂ.ಕೆ. ಭರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬಿ.ಡಿ. ಹಾರುಗೇರಿ, ನಿವೃತ್ತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ II ಸಂ. ಲಾ 15 ಪಿಪಿಇ 83, ದಿನಾಂಕ 27–1–1984.
2. ಸರ್ಕಾರದ ಆದೇಶದ ಸಂ. ಲಾ 116 ಪಿಪಿಇ 84, ದಿನಾಂಕ 31–7–1984.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 11–3–2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಲೆಕ್ಕ–1/300/07–08, ದಿನಾಂಕ 17–3–2008.

**ಪ್ರಸ್ತಾವನೆ :**

1. ಶ್ರೀ ಬಿ.ಡಿ. ಹಾರುಗೇರಿ, ನಿವೃತ್ತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರು ಮೇಲೆ ಓದಲಾದ (1)ರ ದಿನಾಂಕ 27–1–1984ರ ಸರ್ಕಾರದ ಅಧಿಸೂಚನೆಯ ಕ್ರ.ಸಂ. 11ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ 9–2–1984ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

2. ಸದರಿ ನಿವೃತ್ತ ಅಧಿಕಾರಿಯವರ ಜನ್ಮ ದಿನಾಂಕ 1–6–1948 ಆಗಿದ್ದು, ಸದರಿಯವರ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ 31–7–1984ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

3. ಸದರಿ ನಿವೃತ್ತ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ 1–6–1948 ಆಗಿದ್ದು ಅವರು ದಿನಾಂಕ 9–2–84ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು ದಿನಾಂಕ 31–5–2006ರಂದು ಸರ್ಕಾರಿ ಸೇವೆಯಿಂದ ನಿವೃತ್ತರಾಗಿದ್ದು, ಮಹಾಲೇಖಪಾಲಕರು ನಿಯಮಾನುಸಾರ ಹೆಚ್ಚುವರಿ ಸೇವೆಯನ್ನು ಸದರಿಯವರ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಿ, ನಿವೃತ್ತಿ ವೇತನವನ್ನು ನಿಗದಿಪಡಿಸಿರುತ್ತಾರೆ. ಆದರೆ, ಈ ಸೌಲಭ್ಯಕ್ಕೆ ಸಕ್ಷಮ ಪ್ರಾಧಿಕಾರವಾದ ಸರ್ಕಾರದ ಮಂಜೂರಾತಿಯನ್ನು 3 ತಿಂಗಳೊಳಗೆ ಪಡೆಯಬೇಕೆಂದು, ಇಲ್ಲವಾದಲ್ಲಿ, ಸದರಿ ಸೌಲಭ್ಯವನ್ನು ರದ್ದು ಪಡಿಸಲಾಗುವುದೆಂದು ಸದರಿಯವರಿಗೆ ತಿಳಿಸಿರುತ್ತಾರೆ. ಸದರಿ ಅಧಿಕಾರಿಯು 35 ವರ್ಷ 8 ತಿಂಗಳ 8 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುತ್ತಾರೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ಅರ್ಹತಾದಾಯಕ ಸೇವೆಗೆ ನಾಲ್ಕು ವರ್ಷಗಳ ಹೆಚ್ಚುವರಿ ಸೇವೆಯನ್ನು ಸೇರಿಸಲು ಸದರಿಯವರು ಅರ್ಹರಿದ್ದು, ಈ ಬಗ್ಗೆ ಸರ್ಕಾರದ ಆದೇಶವನ್ನು

ಕೋರಿರುತ್ತಾರೆ. ಮತ್ತು ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲಕರ ಕಛೇರಿಗೆ ಕಳುಹಿಸಿಕೊಡಬೇಕೆಂದು ಮನವಿಯಲ್ಲಿ ಕೋರಿರುತ್ತಾರೆ.

4. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆರವರು ಶ್ರೀ ಬಿ.ಡಿ. ಹಾರುಗೇರಿ, ನಿವೃತ್ತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರು ದಿನಾಂಕ 9–2–1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಅವರ ಜನ್ಮ ದಿನಾಂಕ 1–6–1948 ಆಗಿರುತ್ತದೆ. ಸದರಿಯವರು, ಅವರ 35 ವರ್ಷ 8 ತಿಂಗಳು 8 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯನ್ನಾಗಿ ಪರಿಗಣಿಸಿ, ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ ಮತ್ತು ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲಕರ ಕಛೇರಿಗೆ ಕಳುಹಿಸಿಕೊಡಬೇಕೆಂದು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 154 ಪಿಪಿಇ 2008, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2008.**

ಶ್ರೀ ಬಿ.ಡಿ. ಹಾರುಗೇರಿ, ನಿವೃತ್ತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರೀತ್ಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. 727, ವೆಚ್ಚ–7/2008, ದಿನಾಂಕ 21–7–2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಟಿ.ಎಸ್. ಗೋಪಿನಾಥ್, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ – II ಸಂ: ಲಾ 161 ಪಿಪಿಇ 86, ದಿನಾಂಕ: 24.07.1989.
2. ಸರ್ಕಾರದ ಪತ್ರದ ಸಂ. ಲಾ 87 ಪಿಪಿಇ 91, ದಿನಾಂಕ: 13.11.91.
3. ಸದರಿ ಅಧಿಕಾರಿಯವರ ಮನವಿ ದಿನಾಂಕ:13.03.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/427/2007–08, ದಿನಾಂಕ: 27.03.2008.

**ಪ್ರಸ್ತಾವನೆ:**

ಶ್ರೀ ಟಿ.ಎಸ್. ಗೋಪಿನಾಥ್, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 24.07.1989, ಕ್ರ.ಸಂ: 23ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 02.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 18.06.1958 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 13.11.91ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ: 18.06.1958 ಆಗಿದ್ದು, ಅವರು ದಿನಾಂಕ: 02.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 31 ವರ್ಷ 1 ತಿಂಗಳು 14 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುತ್ತಾರೆ. ಆದ್ದರಿಂದ

ಕರ್ನಾಟಕ ನಾಗರೀಕ ಸೇವಾ ನಿಯಮಾಳಿಯ ನಿಯಮ 247(ಎ)ರ ಪ್ರಕಾರ 30 ವರ್ಷಗಳ ಮೇಲ್ಪಟ್ಟ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದಲ್ಲಿ, ಸದರಿ ಅವಧಿಯನ್ನು ಹೆಚ್ಚುವರಿ ಅರ್ಹತಾದಾಯಕ ಸೇವೆಯನ್ನಾಗಿ ಪರಿಗಣಿಸಲು ಅವಕಾಶವಿರುವುದರಿಂದ, ಸದರಿಯವರು ಒಂದು ವರ್ಷದ ಸೇವೆಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಆದೇಶಿಸುವಂತೆ ಕೋರಿರುತ್ತಾರೆ ಮತ್ತು ಸದರಿ ಆದೇಶವನ್ನು ಮಹಾಲೇಖಪಾಲರ ಕಛೇರಿಗೆ ಕಳುಹಿಸಿಕೊಡಬೇಕೆಂದು ಮನವಿ ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು, ಶ್ರೀ ಟಿ.ಎಸ್. ಗೋಪಿನಾಥ್, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು, ಅವರು ದಿನಾಂಕ: 02.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಅವರ ಜನ್ಮ ದಿನಾಂಕ: 18.06.1958 ಆಗಿರುತ್ತದೆ. ಸದರಿ ಅಧಿಕಾರಿಯು 31 ವರ್ಷ 1 ತಿಂಗಳು 14 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರ ಪ್ರಕಾರ ಸದರಿಯವರ ನಿವೃತ್ತಿ ವೇತನಕ್ಕೆ ಒಂದು ವರ್ಷದ ಸೇವೆಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಿ ಆದೇಶವನ್ನು ಹೊರಡಿಸುವಂತೆ ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ ಹಾಗೂ ಈ ಬಗ್ಗೆ ಸರ್ಕಾರದ ಆದೇಶಷ್ನು ಮಹಾಲೇಖಪಾಲಕರ ಕಛೇರಿ ಕಳುಹಿಸಿಕೊಡಲು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 175 ಪಿಪಿಇ 2008, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2008.**

ಶ್ರೀ ಟಿ.ಎಸ್. ಗೋಪಿನಾಥ್, ಸಹಾಯಕ ಅಭಿಯೋಗ ನಿರ್ದೇಶಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರೀತ್ಯ ಶ್ರೀಯುತರಿಗೆ ಒಂದು ವರ್ಷದ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 785 ವೆಚ್ಚ–7/2008, ದಿನಾಂಕ:16.07.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಇ.ಎಂ. ಬಣಕಾರ್, 2ನೇ ಅಧಿಕ ಸರ್ಕಾರಿ ಅಭಿಯೋಜಕರು, 2ನೇ ಅಧಿಕ ಸತ್ರ ನ್ಯಾಯಾಲಯ, ಧಾರವಾಡ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ – II ಸಂ: ಲಾ 161 ಪಿಪಿಇ 86, ದಿನಾಂಕ: 24.07.1989.
2. ಸರ್ಕಾರದ ಪತ್ರದ ಸಂ. ಲಾ 280 ಪಿಪಿಇ 90, ದಿನಾಂಕ: 13.03.91
3. ಸದರಿ ಅಧಿಕಾರಿಯವರ ಮನವಿ ದಿನಾಂಕ:22.12.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ ಲೆಕ್ಕ–1/312/2007–08, ದಿನಾಂಕ: 07.03.2008.

**ಪ್ರಸ್ತಾವನೆ:**

ಶ್ರೀ ಇ.ಎಂ. ಬಣಕಾರ್, 2ನೇ ಅಧಿಕ ಸರ್ಕಾರಿ ಅಭಿಯೋಜಕರು, 2ನೇ ಅಧಿಕ ಸತ್ರ ನ್ಯಾಯಾಲಯ, ಧಾರವಾಡ, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 24.07.1989, ಕ್ರ.ಸಂ:10ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 04.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 01.06.1953 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 13.03.91ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ: 01.06.1953 ಆಗಿದ್ದು, ಸದರಿಯವರು ದಿನಾಂಕ: 04.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ

ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಸದರಿ ಅಧಿಕಾರಿಯು 36 ವರ್ಷ 2 ತಿಂಗಳು ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುತ್ತಾರೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾಳಿಯ ನಿಯಮ 247(ಎ)ರ ಪ್ರಕಾರ 30 ವರ್ಷ ಮೀರಿದ ನಂತರ ಸರ್ಕಾರಿ ಸೇವೆಗೆ ಸೇರಿದ್ದಲ್ಲಿ, ಸರ್ಕಾರಿ ಸೇವೆಗೆ ಸೇರಿದಾಗ ಆದ ವಯಸ್ಸು ಮತ್ತು 30 ವರ್ಷ ಇವೆರಡರ ವ್ಯತ್ಯಾಸದ ಅವಧಿಯನ್ನು ಗರಿಷ್ಟ 8 ವರ್ಷಗಳವರೆಗೆ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಿಕೊಳ್ಳುವ ಅವಕಾಶವಿರುತ್ತದೆಂದು, ಆದ್ದರಿಂದ, 4 ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯನ್ನಾಗಿ ಸೇರ್ಪಡೆ ಮಾಡಲು ಆದೇಶಿಸುವಂತೆ ಕೋರಿ ಸದರಿಯವರು ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು, ಶ್ರೀ ಇ.ಎಂ. ಬಣಕಾರ್, 2ನೇ ಅಧಿಕ ಸರ್ಕಾರಿ ಅಭಿಯೋಜಕರು, 2ನೇ ಅಧಿಕ ಸತ್ರ ನ್ಯಾಯಾಲಯ, ಧಾರವಾಡ, ಅವರು ದಿನಾಂಕ: 04.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಅವರ ಜನ್ಮ ದಿನಾಂಕ: 01.06.1953 ಆಗಿರುತ್ತದೆ. ಸದರಿ ಅಧಿಕಾರಿಯು 36 ವರ್ಷ 2 ತಿಂಗಳು 3 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಗರಿಷ್ಠ ಮಿತಿಯಾದ ನಾಲ್ಕು ವರ್ಷದ ಸೇವೆಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಿ, ಆದೇಶ ಹೊರಡಿಸಲು ಶಿಫಾರಸ್ಸನ್ನು ಮಾಡಿರುತ್ತಾರೆ ಮತ್ತು ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲಕರ ಕಛೇರಿಗೆ ಕಳುಹಿಸಿಕೊಡಬೇಕೆಂದು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 125 ಪಿಪಿಇ 2008, ಬೆಂಗಳೂರು, ದಿನಾಂಕ : 06ನೇ ಸೆಪ್ಟೆಂಬರ್ 2008.**

ಶ್ರೀ ಇ.ಎಂ. ಬಣಕಾರ್, 2ನೇ ಅಧಿಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರೀತ್ಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 653 ವೆಚ್ಚ–7/2008, ದಿನಾಂಕ:21.07.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ :** ಶ್ರೀ ಡಿ. ನಟರಾಜ್, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಮೈಸೂರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ II ಸಂ. ಲಾ 161 ಪಿಪಿಇ 86, ದಿನಾಂಕ 24–7–1989.
2. ಸರ್ಕಾರದ ಪತ್ರದ ಸಂ. ಲಾ 196 ಪಿಪಿಇ 91, ದಿನಾಂಕ 5–12–91.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 23–11–2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ. ಲೆಕ್ಕ–1/325/07–08, ದಿನಾಂಕ 7–3–2008.

**ಪ್ರಸ್ತಾವನೆ :**

ಶ್ರೀ ಡಿ. ನಟರಾಜ್, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಮೈಸೂರು ಇವರು ಮೇಲೆ ಓದಲಾದ (1)ರ ದಿನಾಂಕ 24–7–1989ರ ಸರ್ಕಾರದ ಅಧಿಸೂಚನೆಯ ಕ್ರ.ಸಂ. 59ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ 3–8–1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

2. ಸದರಿ ಅಧಿಕಾರಿಯವರ ಜನ್ಮ ದಿನಾಂಕ 1–10–1954 ಆಗಿದ್ದು, ಸದರಿಯವರ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ 5–12–91ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

3. ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ 1–10–1954 ಆಗಿದ್ದು, ಅವರು ದಿನಾಂಕ 3–8–1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 34 ವರ್ಷ 10 ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇರಿರುತ್ತಾರೆಂದು, ಆದಕಾರಣ ಒದಗಿಸಿರುವ ದಾಖಲಾತಿಗಳನ್ನು ಪರಿಗಣಿಸಿ, ನಿಯಮಾನುಸಾರ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಲಾಭವನ್ನು ನೀಡಬೇಕೆಂದು ಮನವಿ ಮಾಡಿಕೊಂಡಿರುತ್ತಾರೆ.

4. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆರವರು ಶ್ರೀ ಡಿ. ನಟರಾಜ್, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಮೈಸೂರು ಇವರು ದಿನಾಂಕ 3–8–1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಅವರ ಜನ್ಮ ದಿನಾಂಕ 1–10–1954 ಆಗಿರುತ್ತದೆ. ಸದರಿಯವರು, ಅವರ 34 ವರ್ಷ 10 ತಿಂಗಳು 2 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯನ್ನಾಗಿ ಪರಿಗಣಿಸಿ, ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ ಮತ್ತು ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲಕರ ಕಛೇರಿಗೆ ಕಳುಹಿಸಿಕೊಡಬೇಕೆಂದು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 124 ಪಿಪಿಇ 2008, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2008.**

ಶ್ರೀ ಡಿ. ನಟರಾಜ್, ಸಹಾಯಕ ಅಭಿಯೋಗ ನಿರ್ದೇಶಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1) ರೀತ್ಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 654 ವೆಚ್ಚ–7/2008, ದಿನಾಂಕ 21–7–2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಪಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಕೆ.ಬಿ. ದೇಸಾಯಿ, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಗದಗ, ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ–I ಸಂ: ಲಾ 15 ಪಿಪಿಇ 83, ದಿನಾಂಕ:27.01.1984.
2. ಸರ್ಕಾರದ ಆದೇಶದ ಸಂ: ಲಾ 53 ಪಿಪಿಇ 1986, ದಿನಾಂಕ: 24/25/27/3/1986.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 21.04.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ:/ಲೆಕ್ಕ–1/15/2008–09, ದಿನಾಂಕ: 13.05.2008

**ಪ್ರಸ್ತಾವನೆ:**

ಶ್ರೀ ಕೆ.ಬಿ. ದೇಸಾಯಿ, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಗದಗ, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 27.01.1984ರ ಕ್ರ.ಸಂ: 15ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 28.02.1984ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 01.03.1950 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 24/25/27.03.1986ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿ ಅಧಿಕಾರಿಯವರ ಜನ್ಮ ದಿನಾಂಕ 01.03.1950 ಆಗಿದ್ದು, ಅವರು ದಿನಾಂಕ: 28.02.1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ

ಸೇರಿರುವುದರಿಂದ, ಸದರಿಯವರು 33 ವರ್ಷ 11 ತಿಂಗಳು ಮತ್ತು 27 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷಗಳ ನಂತರ ಸರ್ಕಾರಿ ಸೇವೆಗೆ ಸೇರಿದಲ್ಲಿ, ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವನ್ನು ಕಲ್ಪಿಸಿರುವುದರಿಂದ, 3ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಆದೇಶಿಸುವಂತೆ ಮತ್ತು ಸದರಿ ಆದೇಶ ಪ್ರತಿಯನ್ನು ಮಹಾಲೇಖಪಾಲಕರಿಗೆ ಕಳುಹಿಸಿಕೊಡಬೇಕೆಂದು ಮನವಿಯಲ್ಲಿ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಕೆ.ಬಿ. ದೇಸಾಯಿ, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಗದಗ, ಇವರು ದಿನಾಂಕ: 28.02.1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಸೇರಿದ್ದು, ಇವರ ಜನ್ಮ ದಿನಾಂಕ: 01.03.1950 ಆಗಿರುತ್ತದೆ. ಸದರಿಯವರು ಅವರ 33 ವರ್ಷ 11 ತಿಂಗಳು 27 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ 3 ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಮಹಾಲೇಖಪಾಲರಿಗೆ ಶಿಫಾರಸ್ಸು ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 225 ಪಿಪಿಇ 2008, ಬೆಂಗಳೂರು, ದಿನಾಂಕ 6ನೇ ಸೆಪ್ಟೆಂಬರ್ 2008**.

ಶ್ರೀ ಕೆ.ಬಿ.ದೇಸಾಯಿ, ನಿವೃತ್ತ ಅಭಿಯೋಗ ನಿರ್ದೇಶಕರು, ಇವರು ತಮ್ಮ 33ನೇ ವರ್ಷದಲ್ಲಿ ಸರ್ಕಾರದ ಸೇವೆಗೆ ಸೇರಿರುವುದು ಶ್ರೀಯುತರ ಅಧಿಕೃತ ದಾಖಲೆಗಳಿಂದ ದೃಢಪಡುತ್ತದೆ. ಆದುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರನ್ವಯ ಮೂರು ವರ್ಷಗಳ ಅಧಿಕ ಅವಧಿಯನ್ನು ಶ್ರೀಯುತರ ನಿವೃತ್ತಿ ವೇತನ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಸರ್ಕಾರವು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 747 ವೆಚ್ಚ-7/2008, ದಿನಾಂಕ: 16.07.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ :** ಶ್ರೀ ವಿ.ಎಸ್. ಭಟ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 6ನೇ ಎಸ್ಎಂಎಂ ನ್ಯಾಯಾಲಯ, ಬೆಂಗಳೂರು ನಗರ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರನ್ವಯ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ II ಸಂ. ಲಾ 161 ಪಿಪಿಇ 86, ದಿನಾಂಕ 24-7-1989.
2. ಸರ್ಕಾರದ ಪತ್ರದ ಸಂ. ಲಾ 29 ಪಿಪಿಇ 91, ದಿನಾಂಕ 13-11-91.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 2-1-2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ. ಲೆಕ್ಕ-1/334/07-08, ದಿನಾಂಕ 15-2-2008.

**ಪ್ರಸ್ತಾವನೆ :**

1. ಶ್ರೀ ವಿ.ಎಸ್. ಭಟ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 6ನೇ ಎಸಿಎಂಎಂ ನ್ಯಾಯಲಯ, ಬೆಂಗಳೂರು ನಗರ, ಇವರು ಮೇಲೆ ಓದಲಾದ (1)ರ ದಿನಾಂಕ 24-7-1989ರ ಸರ್ಕಾರದ ಅಧಿಸೂಚನೆಯ ಕ್ರ.ಸಂ. 21ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ 4-8-89ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

2. ಸದರಿ ಅಧಿಕಾರಿಯವರ ಜನ್ಮ ದಿನಾಂಕ 25-2-1958 ಆಗಿದ್ದು, ಸದರಿಯವರ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ 13-11-91ರ ಸರ್ಕಾರದ ಪತ್ರದ್ಲಲಿ ಒಪ್ಪಲಾಗಿದೆ.

3. ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ, ಸದರಿಯವರ ಜನ್ಮ ದಿನಾಂಕ: 25–2–1958 ಆಗಿದ್ದು, ಅವರು ದಿನಾಂಕ: 4–8–1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 31 ವರ್ಷ 6 ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇರಿರುತ್ತಾರೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರ ಪ್ರಕಾರ 30 ವರ್ಷಕ್ಕಿಂತ ಮೇಲ್ಪಟ್ಟ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದಲ್ಲಿ ಅಂತಹ ಅವಧಿಯನ್ನು ಗರಿಷ್ಠ 4 ವರ್ಷಗಳ ಮಿತಿಗೆ ಒಳಪಟ್ಟು ಹೆಚ್ಚುವರಿ ಅರ್ಹತಾದಾಯಕ ಸೇವೆಯಾಗಿ ಸೇರ್ಪಡೆ ಮಾಡಲು ಅವಕಾಶವಿರುತ್ತದೆ. ಆದ್ದರಿಂದ, ಸದರಿಯವರು ನಾಲ್ಕು ವರ್ಷಗಳ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಆದೇಶ ಹೊರಡಿಸಬೇಕೆಂದು ಮತ್ತು ಸದರಿ ಪ್ರತಿಯನ್ನು ಮಹಾಲೇಖಪಾಲಕರ ಕಛೇರಿಗೆ ರವಾನಿಸಬೇಕೆಂದು ಮನವಿಯಲ್ಲಿ ಕೋರಿರುತ್ತಾರೆ.

4. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯವರು ಶ್ರೀ ವಿ.ಎಸ್. ಭಟ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 6ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ನಗರ, ಇವರು ದಿನಾಂಕ 4–8–1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಅವರ ಜನ್ಮ ದಿನಾಂಕ 25–2–1958 ಆಗಿರುತ್ತದೆ. ಸದರಿ ಅಧಿಕಾರಿಯು 31 ವರ್ಷ 5 ತಿಂಗಳು 9 ದಿನಗಳ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಸದರಿಯವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಒಂದು ವರ್ಷದ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯನ್ನಾಗಿ ಪರಿಗಣಿಸಿ ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ. ಈ ಕುರಿತು ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 97 ಪಿಪಿಇ 2008, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2008.**

ಶ್ರೀ ವಿ.ಎಸ್. ಭಟ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರೀತ್ಯ ಒಂದು ವರ್ಷದ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. 657 ವೆಚ್ಚ–7/2008, ದಿನಾಂಕ 21–7–2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ :** ಶ್ರೀ ಎಂ.ಎ. ತಟಗಾರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಧಾರವಾಡ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ II ಸಂ. ಲಾ 161 ಪಿಪಿಇ 86, ದಿನಾಂಕ 24–7–1989.
2. ಸರ್ಕಾರದ ಪತ್ರದ ಸಂ. ಲಾ 270 ಪಿಪಿಇ 90, ದಿನಾಂಕ 13–3–91.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 26–12–2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ. ಲೆಕ್ಕ–1/353/07–08, ದಿನಾಂಕ 19–2–2008.

**ಪ್ರಸ್ತಾವನೆ :**

1. ಶ್ರೀ ಎಂ.ಎ. ತಟಗಾರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಧಾರವಾಡ, ಇವರು ಮೇಲೆ ಓದಲಾದ (1)ರ ದಿನಾಂಕ 24–7–1989ರ ಸರ್ಕಾರದ ಅಧಿಸೂಚನೆಯ ಕ್ರ.ಸಂ. 54ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 7–8–89ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕೆ ಹಾಜರಾಗಿರುತ್ತಾರೆ.

2. ಸದರಿ ಅಧಿಕಾರಿಯವರ ಜನ್ಮ ದಿನಾಂಕ 1–6–1955 ಆಗಿದ್ದು, ಸದರಿಯವರ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ 13–3–91ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

3. ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ 1–6–1955 ಆಗಿದ್ದು, ಅವರು ದಿನಾಂಕ 7–8–1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 34 ವರ್ಷ 1 ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇರಿರುತ್ತಾರೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರ ಪ್ರಕಾರ 30 ವರ್ಷ ಮೀರಿದ ನಂತರ ಸರ್ಕಾರಿ ಸೇವೆಗೆ ಸೇರಿದ್ದಲ್ಲಿ, ಸರ್ಕಾರಿ ಸೇವೆಗೆ ಸೇರಿದಾಗ ಇದ್ದ ವಯಸ್ಸು ಮತ್ತು 30 ವರ್ಷ ಇವೆರಡರ ವ್ಯತ್ಯಾಸದ ಅವಧಿಯನ್ನು ಗರಿಷ್ಠ 8 ವರ್ಷಗಳ ವರೆಗೆ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶವಿರುತ್ತದೆ. ಆದ್ದರಿಂದ, ಸದರಿಯವರಿಗೆ ನಾಲ್ಕು ವರ್ಷಗಳ ಅರ್ಹತಾದಾಯಕ ಸೇವೆಯನ್ನು ಸೇರ್ಪಡೆ ಮಾಡಲು ಸರ್ಕಾರವು ಆದೇಶ ಹೊರಡಿಸಬೇಕೆಂದು ಮತ್ತು ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲಕರಿಗೆ ಕಳುಹಿಸಿಕೊಡಬೇಕೆಂದು ಮನವಿಯಲ್ಲಿ ಕೋರಿರುತ್ತಾರೆ.

4. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರು ಶ್ರೀ ಎಂ.ಎ. ತಟಗಾರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಧಾರವಾಡ, ಇವರು ದಿನಾಂಕ 7–8–1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಅವರ ಜನ್ಮ ದಿನಾಂಕ 1–6–1955 ಆಗಿರುತ್ತದೆ. ಸದರಿಯವರು ಅವರ 34 ವರ್ಷ 2 ತಿಂಗಳು 6 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಸದರಿಯವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯನ್ನಾಗಿ ಪರಿಗಣಿಸಿ ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ. ಈ ಕುರಿತು ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 99 ಪಿಪಿಇ 2008, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2008.**

ಶ್ರೀ ಎಂ.ಎ. ತಟಗಾರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರೀತ್ಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. 697 ವೆಚ್ಚ–7/2008, ದಿನಾಂಕ 21–7–2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ :** ಶ್ರೀ ಡಿ.ಜೆ. ಶಿವರಾಂ, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಮೈಸೂರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ II ಸಂ. ಲಾ 161 ಪಿಪಿಇ 86, ದಿನಾಂಕ 24–7–1989.
2. ಸರ್ಕಾರದ ಪತ್ರದ ಸಂ. ಲಾ 195 ಪಿಪಿಇ 91, ದಿನಾಂಕ 5–12–91.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 4–9–2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ. ಲೆಕ್ಕ–1/298/06–07, ದಿನಾಂಕ 1–10–2007.

**ಪ್ರಸ್ತಾವನೆ :**

1. ಶ್ರೀ ಡಿ.ಕೆ. ಶಿವರಾಂ, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರಕ ಕಛೇರಿ, ಮೈಸೂರು, ಇವರು ಮೇಲೆ ಓದಲಾದ (1)ರ ದಿನಾಂಕ: 24–7–1989ರ ಸರ್ಕಾರದ ಅಧಿಸೂಚನೆಯ ಕ್ರ.ಸಂ. 22ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 5–8–89ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

2. ಸದರಿ ನಿವೃತ್ತ ಅಧಿಕಾರಿಯವರ ಜನ್ಮ ದಿನಾಂಕ 23–12–1949 ಆಗಿದ್ದು, ಸದರಿಯವರ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 5–12–91ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

3. ಸದರಿ ನಿವೃತ್ತ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ 23-12-1949 ಆಗಿದ್ದು, ಅವರು ದಿನಾಂಕ: 5-8-1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು ಸರ್ಕಾರಿ ಸೇವೆಗೆ ಸೇರಿದಾಗ ಅವರ ವಯಸ್ಸು 39 ವರ್ಷ 7 ತಿಂಗಳು ಆಗಿತ್ತೆಂದು ತಿಳಿಸಿರುತ್ತಾರೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರ ಪ್ರಕಾರ 30 ವರ್ಷ ಮೀರಿದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದಲ್ಲಿ, ಸರ್ಕಾರಿ ಸೇವೆಗೆ ಸೇರಿದಾಗ ಆಗಿದ್ದ ವಯಸ್ಸು ಮತ್ತು 30 ವರ್ಷ ಇವೆರಡರ ವ್ಯತ್ಯಾಸದ ಅವಧಿಯನ್ನು ಗರಿಷ್ಠ 8 ವರ್ಷಗಳವರೆಗೆ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವ ಅವಕಾಶಗಳು ಇರುತ್ತದೆ. ಆದ್ದರಿಂದ, ಸದರಿಯವರಿಗೆ 8 ವರ್ಷಗಳ ಹೆಚ್ಚುವರಿ ಅರ್ಹತಾದಾಯಕ ಸೇವೆಯನ್ನು ಸೇರ್ಪಡೆ ಮಾಡಲು ಸರ್ಕಾರವು ಆದೇಶಿಸಬೇಕೆಂದು ಮತ್ತು ಸದರಿ ಪ್ರತಿಯನ್ನು ಮಹಾಲೇಖಪಾಲಕರ ಕಛೇರಿಗೆ ಕಳುಹಿಸಿಕೊಡಬೇಕೆಂದು ಸದರಿಯವರು ಮನವಿಯಲ್ಲಿ ಕೋರಿರುತ್ತಾರೆ.

4. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರು ಶ್ರೀ ಡಿ.ಜೆ. ಶಿವರಾಂ, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಮೈಸೂರು ಇವರು ದಿನಾಂಕ 5-8-1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಅವರ ಜನ್ಮ ದಿನಾಂಕ 23-12-1949 ಆಗಿರುತ್ತದೆ. ಸದರಿ ಅಧಿಕಾರಿಯು ಅವರ 39ನೇ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರದ ಪ್ರಕಾರ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯನ್ನಾಗಿ ಪರಿಗಣಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ. ಅದಕ್ಕಾಗಿ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 509 ಪಿಪಿಇ 2007, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2008.**

ಶ್ರೀಯುತ ಡಿ.ಜೆ. ಶಿವರಾಂ, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು, ಇವರಿಗೆ ಕರ್ನಾಟದಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರೀತ್ಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಅಧಿಕ ಸೇವೆಯನ್ನು ಶ್ರೀಯುತರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ 904 ವೆಚ್ಚ-7/2008, ದಿನಾಂಕ 7-8-2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ :** ಶ್ರೀ ಎನ್. ಬೀರಲಿಂಗಪ್ಪ, ಅಧಿಕ ಸರ್ಕಾರಿ ಅಭಿಯೋಜಕರು, ಶಿವಮೊಗ್ಗ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 123 ಪಿಪಿಇ 85(II) ದಿನಾಂಕ 20-2-1986.
2. ಸರ್ಕಾರದ ಆದೇಶದ ಸಂ: ಲಾ 182 ಪಿಪಿಇ 86, ದಿನಾಂಕ 6/7-10-1986.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 20/22-12-2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಲೆಕ್ಕ-1/307/07-08, ದಿನಾಂಕ 6-2-2008.

**ಪ್ರಸ್ತಾವನೆ :**

1. ಶ್ರೀ ಎನ್. ಬೀರಲಿಂಗಪ್ಪ, ಅಧಿಕ ಸರ್ಕಾರಿ ಅಭಿಯೋಜಕರು, ಶಿವಮೊಗ್ಗ, ಇವರು ಮೇಲೆ ಓದಲಾದ (1)ರ ದಿನಾಂಕ: 20-2-1086ರ ಸರ್ಕಾರದ ಅಧಿಸೂಚನೆಯ ಕ್ರ.ಸಂ. 17ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ 1-3-1986ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

2. ಸದರಿ ನಿವೃತ್ತ ಅಧಿಕಾರಿಯವರ ಜನ್ಮ ದಿನಾಂಕ 6–4–1950 ಆಗಿದ್ದು, ಸದರಿಯವರ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ 6/7–10–1986ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

3. ಸದರಿ ನಿವೃತ್ತ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ, ಸದರಿ ಅಧಿಕಾರಿಯು ದಿನಾಂಕ: 1–3–1986ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿದ್ದು, ಸದರಿಯವರ ಜನ್ಮ ದಿನಾಂಕ 6–4–1950 ಆಗಿರುತ್ತದೆಂದು ತಿಳಿಸಿರುತ್ತಾರೆ. ಸದರಿ ಅಧಿಕಾರಿಯು 35 ವರ್ಷ 10 ತಿಂಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ಪ್ರಕಾರ, 30 ವರ್ಷಗಳಿಗಿಂತ ಮೇಲ್ಪಟ್ಟ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಲ್ಲಿ, ಅಂತಹ ಅವಧಿಯನ್ನು ಹೆಚ್ಚುವರಿಯಾಗಿ ಗರಿಷ್ಠ ನಾಲ್ಕು ವರ್ಷಗಳ ಮಿತಿಗೆ ಒಳಪಟ್ಟು, ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಅವಕಾಶ ಇರುತ್ತದೆ. ಆದ್ದರಿಂದ, ನಿಯಮಾನುಸಾರ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತಿ ವೇತನ ಸೌಲಭ್ಯಕ್ಕೆ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯಲ್ಲಿ ಸೇರ್ಪಡೆ ಮಾಡುವ ಬಗ್ಗೆ ಸರ್ಕಾರದ ಆದೇಶವನ್ನು ಹೊರಡಿಸಬೇಕೆಂದು ಸದರಿ ಅಧಿಕಾರಿಯು ಮನವಿಯಲ್ಲಿ ಕೋರಿರುತ್ತಾರೆ.

4. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರು ಶ್ರೀ ಎನ್. ಬೀರಲಿಂಗಪ್ಪ, ಅಧಿಕ ಸರ್ಕಾರಿ ಅಭಿಯೋಜಕರು, ಶಿವಮೊಗ್ಗ, ರವರು ದಿನಾಂಕ 1–3–1986ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಸದರಿ ಅಧಿಕಾರಿಯ ಜನ್ಮ ದಿನಾಂಕ 6–4–1950 ಆಗಿರುತ್ತದೆ. ಸದರಿ ಅಧಿಕಾರಿಯು, ಅವರ 35 ವರ್ಷ 10 ತಿಂಗಳು 25 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಸದರಿಯವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯನ್ನಾಗಿ ಪರಿಗಣಿಸಿ, ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ. ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 78 ಪಿಪಿಇ 2008, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2008.**

ಶ್ರೀಯುತ ಎನ್. ಬೀರಲಿಂಗಪ್ಪ, ನಿವೃತ್ತ ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ರೀತ್ಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಅಧಿಕ ಸೇವೆಯನ್ನು ಶ್ರೀಯುತರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 870, ವೆಚ್ಚ–7/2008, ದಿನಾಂಕ 7–8–2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1311

**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಬಿ. ಅಣ್ಣೇಗೌಡ, ನಿವೃತ್ತ 1ನೇ ಅಪರ ಸರ್ಕಾರಿ ಅಭಿಯೋಜಕರು, ಬೆಂಗಳೂರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 217 ಪಿಪಿಇ 80(1), ದಿನಾಂಕ:06.06.1981.
2. ಸರ್ಕಾರದ ಆದೇಶದ ಸಂ: ಲಾ 151 ಪಿಪಿಇ 82, ದಿನಾಂಕ:8/11.10.82.
3. ಸದರಿ ಅಧಿಕಾರಿಯವರ ಮನವಿ ದಿನಾಂಕ:08.05.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ:/ಸಿಶಾ–1/45/2007–08, ದಿನಾಂಕ:18.05.2007.

**ಪ್ರಸ್ತಾವನೆ:**

1. ಶ್ರೀ ಬಿ. ಅಣ್ಣೇಗೌಡ, ನಿವೃತ್ತ 1ನೇ ಅಪರ ಸರ್ಕಾರಿ ಅಭಿಯೋಜಕರು, ಬೆಂಗಳೂರು ನಗರ ಇವರು ಮೇಲೆ ಓದಲಾದ (1)ರ ದಿನಾಂಕ: 06.06.1981ರ ಸರ್ಕಾರದ ಅಧಿಸೂಚನೆಯ ಕ್ರ.ಸಂ:22ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ

ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 05.04.81ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

2. ಸದರಿ ಅಧಿಕಾರಿಯವರ ಜನ್ಮ ದಿನಾಂಕ:29.05.1949 ಆಗಿದ್ದು, ಸದರಿಯವರ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ:8/11.10.82ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

3. ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ:29.05.1949 ಆಗಿದ್ದು, ಅವರು ದಿನಾಂಕ:05.04.1981 ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 31 ವರ್ಷ 10ತಿಂಗಳ 6ದಿನದ ವಯಸ್ಸಿನಲ್ಲಿ ಸರ್ಕಾರಿ ಸೇರಿದಂತೆ ಆಗಿರುತ್ತದೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರ ಪ್ರಕಾರ 30 ವರ್ಷ ವಯಸ್ಸಿಗೆ ಮೇಲ್ಪಟ್ಟು ಸರ್ಕಾರಿ ಸೇವೆಗೆ ಸೇರಿದಲ್ಲಿ ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಬೇಕಾಗಿರುತ್ತದೆ. ಆದ್ದರಿಂದ, ಸದರಿಯವರ ಅರ್ಹತಾದಾಯಕ ಸೇವೆಗೆ 1 ಸೇವೆಯನ್ನು ಹೆಚ್ಚುವರಿಯಾಗಿ ಸೇರ್ಪಡೆ ಮಾಡಲು ಮಹಾಲೇಖಪಾಲಕರ ಕಛೇರಿಗೆ ಶಿಫಾರಸ್ಸು ಮಾಡಿ, ಆದೇಶವನ್ನು ಹೊರಡಿಸಬೇಕೆಂದು ಸದರಿಯವರು ಮನವಿಯಲ್ಲಿ ಕೋರಿರುತ್ತಾರೆ.

4. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರು ಶ್ರೀ ಬಿ. ಅಣ್ಣೇಗೌಡ, ನಿವೃತ್ತ 1ನೇ ಅಪರ ಸರ್ಕಾರಿ ಅಭಿಯೋಜಕರು, ಬೆಂಗಳೂರು ನಗರ, ಇವರು ದಿನಾಂಕ: 05.04.1981ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯ ಪ್ರಭಾರವನ್ನು ವಹಿಸಿಕೊಂಡಿರುತ್ತಾರೆ. ಅವರ ಜನ್ಮ ದಿನಾಂಕ: 29.05.1949 ಆಗಿರುತ್ತದೆ. ಆದ್ದರಿಂದ, ಸದರಿಯವರು 30 ವರ್ಷಗಳ ನಂತರ, ಅವರ 31 ವರ್ಷ 10 ತಿಂಗಳು 6 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಒಂದು ವರ್ಷದ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯನ್ನಾಗಿ ಪರಿಗಣಿಸಿ, ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ. ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 263 ಪಿಪಿಇ 2007, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2008.**

ಶ್ರೀ ಬಿ. ಅಣ್ಣೇಗೌಡ, ನಿವೃತ್ತ 1ನೇ ಅಪರ ಸರ್ಕಾರಿ ಅಭಿಯೋಜಕರು, ಇವರ ಜನ್ಮ ದಿನಾಂಕ: 29.05.1949 ಆಗಿದ್ದು, ಅವರು ಕರ್ತವ್ಯಕ್ಕೆ ಹಾಜರಾದ ದಿನಾಂಕ:05.04.1981ನ್ನು ಆಧರಿಸಿ ಪರಿಶೀಲಿಸಲಾಗಿದ್ದು, ಸದರಿಯವರು ಸರ್ಕಾರದ ಕೆಲಸಕ್ಕೆ ಅವರ 31ನೇ ವರ್ಷದಲ್ಲಿ ಸೇರಿರುವುದು ಸ್ಪಷ್ಟಪಡುತ್ತದೆ. ಈ ಹಿನ್ನಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರನ್ವಯ ಲಭ್ಯವಾಗುವ ಒಂದು ವರ್ಷದ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:823 ವೆಚ್ಚ–7/2008, ದಿನಾಂಕ: 07.08.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಬಾಲಕಿಷನ್, ನಿವೃತ್ತ ಸರ್ಕಾರಿ ಅಭಿಯೋಜಕರು, 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೀದರ್, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ–II ಸಂ: ಲಾ 15 ಪಿಪಿಇ 83, ದಿನಾಂಕ: 27.01.1984.
2. ಸರ್ಕಾರದ ಆದೇಶದ ಸಂ: ಲಾ 233 ಪಿಪಿಇ 84, ದಿನಾಂಕ: 27/28.11.1984.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 30.04.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ:/ಲೆಕ್ಕ–1/20/2006–07, ದಿನಾಂಕ: 15.05.2008.

**ಪ್ರಸ್ತಾವನೆ:**

1. ಶ್ರೀ ಬಾಲಕಿಷನ್, ನಿವೃತ್ತ ಸರ್ಕಾರಿ ಅಭಿಯೋಜಕರು, 3ನೇ ಶೀಘ್ರ ವಿಲೇವಾರಿ ನ್ಯಾಯಾಲಯ, ಬೀದರ್, ಇವರು ಮೇಲೆ ಓದಲಾದ (1)ರ ದಿನಾಂಕ:27.01.1984ರ ಸರ್ಕಾರದ ಅಧಿಸೂಚನೆಯ ಕ್ರ.ಸಂ:9ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ:16.02.1984ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

2. ಸದರಿ ಅಧಿಕಾರಿಯವರ ಜನ್ಮ ದಿನಾಂಕ:15.10.1948 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ:27/28.11.1984ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

3. ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ: 15.10.1948 ಆಗಿದ್ದು, ಅವರು ದಿನಾಂಕ: 16.02.1984ರ ಪೂರ್ವಾಹ್ನ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 35 ವರ್ಷ 4 ತಿಂಗಳ 1 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇರಿದಂತೆ ಆಗಿರುತ್ತದೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)(1)ರನ್ವಯ ಗರಿಷ್ಟ 4 ವರ್ಷಗಳ ಸೇವೆಯನ್ನು ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಆದೇಶಿಸುವಂತೆ ಸದರಿಯವರು ಮನವಿಯಲ್ಲಿ ಕೋರಿರುತ್ತಾರೆ.

4. ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರು ಶ್ರೀ ಬಾಲಕಿಷನ್, ನಿವೃತ್ತ ಸರ್ಕಾರಿ ಅಭಿಯೋಜಕರು, 3ನೇ ಶೀಘ್ರವಿಲೇವಾರಿ ನ್ಯಾಯಲಯ, ಬೀದರ್, ಇವರು ದಿನಾಂಕ: 16.02.1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಅವರ ಜನ್ಮ ದಿನಾಂಕ: 15.10.1948 ಆಗಿರುತ್ತದೆ. ಸದರಿಯವರು ಅವರ 35 ವರ್ಷ 04 ತಿಂಗಳು 1 ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆಗೆ ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ. ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲಕರ ಕಛೇರಿಗೆ ರವಾನಿಸಲು ಕೋರುತ್ತಾ, ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 198 ಪಿಪಿಇ 2008, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2008.**

ಶ್ರೀ ಬಾಲಕಿಷನ್, ನಿವೃತ್ತ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರೀತ್ಯ ಗರಿಷ್ಟ ಮಿತಿಯಾದ ನಾಲ್ಕು ವರ್ಷಗಳ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 748 ವೆಚ್ಚ–7/2008, ದಿನಾಂಕ: 21.07.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಷಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ವಿ.ಕೆ. ಪಾಟೀಲ್, 6ನೇ ಅಧಿಕ ಸರ್ಕಾರಿ ಅಭಿಯೋಜಕರು, ಬೆಂಗಳೂರು ನಗರ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕಾಗಿ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ–II ಸಂ: ಲಾ 15 ಪಿಪಿಇ 83, ದಿನಾಂಕ: 27.01.1984.
2. ಸರ್ಕಾರದ ಆದೇಶದ ಸಂ: ಲಾ 184 ಪಿಪಿಇ 84, ದಿನಾಂಕ: 21/26.09.1984.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 15.11.2007.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ:/ಲೆಕ್ಕ–1/255/ 2007–08, ದಿನಾಂಕ: 07.01.08.

**ಪ್ರಸ್ತಾವನೆ:**

ಶ್ರೀ ವಿ.ಕೆ. ಪಾಟೀಲ್, 6ನೇ ಅಧಿಕ ಸರ್ಕಾರಿ ಅಭಿಯೋಜಕರು, ಬೆಂಗಳೂರು ನಗರ, ಇವರು ಮೇಲೆ ಓದಲಾದ (1)ರ ದಿನಾಂಕ: 27.01.1984ರ ಸರ್ಕಾರದ ಅಧಿಸೂಚನೆಯ ಕ್ರ.ಸಂ: 24ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 10.02.1984ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 23.09.1951 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 21/26.09.1984ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ: 23.09.1951 ಆಗಿದ್ದು, ಅವರು ದಿನಾಂಕ: 10.02.1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 32 ವರ್ಷ 4 ತಿಂಗಳ 17 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇರಿದಂತೆ ಆಗಿರುತ್ತದೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)ರ ಪ್ರಕಾರ 30 ವರ್ಷ ಮೇಲ್ಪಟ್ಟ ಅವಧಿಗೆ ಸರ್ಕಾರಿ ಸೇವೆಗೆ ಸೇರಿದ್ದಲ್ಲಿ ಸದರಿ ಅವಧಿಯನ್ನು ಅರ್ಹತಾದಾಯಕ ಸೇವೆಗೆ ಸೇರಿಸಲು ಅವಕಾಶವನ್ನು ಕಲ್ಪಿಸಲಾಗಿದೆ. ಆದ್ದರಿಂದ, ನಿಯಮಾನುಸಾರ ಹೆಚ್ಚುವರಿ ಅರ್ಹತಾದಾಯಕ ಸೇವೆಗೆ ಆದೇಶಿಸಬೇಕೆಂದು ಸದರಿ ಅಧಿಕಾರಿಯು ಮನವಿಯಲ್ಲಿ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರು ಶ್ರೀ ವಿ.ಕೆ. ಪಾಟೀಲ್, 6ನೇ ಅಧಿಕ ಸರ್ಕಾರಿ ಅಭಿಯೋಜಕರು, ಬೆಂಗಳೂರು ನಗರ, ಇವರು ದಿನಾಂಕ: 10.02.1984ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಸದರಿಯವರ ಜನ್ಮ ದಿನಾಂಕ: 23.09.1951 ಆಗಿರುತ್ತದೆ. ಸದರಿ ಅಧಿಕಾರಿಗಳು 32 ವರ್ಷಗಳ ನಂತರ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಸದರಿಯವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರ ಪ್ರಕಾರ ಎರಡು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯಲ್ಲಿ ಸೇರ್ಪಡೆಗೆ ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ. ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 23 ಪಿಪಿಇ 2008, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2008**.

ಶ್ರೀ ವಿ.ಕೆ. ಪಾಟೀಲ್, ಅಧಿಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರೀತ್ಯ ಎರಡು ವರ್ಷಗಳ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:791 ವೆಚ್ಚ–7/2008, ದಿನಾಂಕ: 21.07.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಷಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಂ.ಎಸ್. ರಂಗರಾಜು, ಅಪರ ಸರ್ಕಾರಿ ಅಭಿಯೋಜಕರು, ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಡ್ಯ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 123 ಪಿಪಿಇ 85(II), ದಿನಾಂಕ: 20.02.1986.
2. ಸರ್ಕಾರದ ಆದೇಶದ ಸಂ: ಲಾ 169 ಪಿಪಿಇ 86, ದಿನಾಂಕ: 27.07.1987.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 15.02.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ:/ಲೆಕ್ಕ–1/408/ 07–08, ದಿನಾಂಕ: 19.04.2008.

**ಪ್ರಸ್ತಾವನೆ:**

ಶ್ರೀ ಎಂ.ಎಸ್. ರಂಗರಾಜು, ಅಪರ ಸರ್ಕಾರಿ ಅಭಿಯೋಜಕರು, ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಡ್ಯ, ಇವರು ಮೇಲೆ ಓದಲಾದ (1)ರ ದಿನಾಂಕ: 20.02.1986ರ ಸರ್ಕಾರದ ಅಧಿಸೂಚನೆಯ ಕ್ರ.ಸಂ: 11ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 03.03.1986ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 08.06.1952 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 27.07.1987ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ: 08.06.1952 ಆಗಿದ್ದು, ಅವರು ದಿನಾಂಕ: 03.03.1986ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 33 ವರ್ಷ 8 ತಿಂಗಳ 25 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇರಿದಂತೆ ಆಗಿರುತ್ತದೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 247(ಎ)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಗೆ ಆದೇಶಿಸಬೇಕೆಂದು ಸದರಿ ಅಧಿಕಾರಿಯು ಮನವಿಯಲ್ಲಿ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ರವರು ಶ್ರೀ ಎಂ.ಎಸ್. ರಂಗರಾಜು, ಅಪರ ಸರ್ಕಾರಿ ಅಭಿಯೋಜಕರು, ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಡ್ಯ, ಇವರು ದಿನಾಂಕ: 03.03.1986ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಸದರಿಯವರ ಜನ್ಮ ದಿನಾಂಕ: 08.06.1952 ಆಗಿರುತ್ತದೆ. ಸದರಿ ಅಧಿಕಾರಿಗಳು 33 ವರ್ಷ 8 ತಿಂಗಳು 25 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಸದರಿಯವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರ ಪ್ರಕಾರ ಮೂರು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಯಲ್ಲಿ ಸೇರ್ಪಡೆಗೆ ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ. ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲಕರ ಕಛೇರಿಗೆ ರವಾನಿಸಬೇಕೆಂದು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 196 ಪಿಪಿಇ 2008, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2008.**

ಶ್ರೀ ಎಂ.ಎಸ್. ರಂಗರಾಜು, ಅಪರ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರೀತ್ಯ ಮೂರು ವರ್ಷಗಳ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:658, ವೆಚ್ಚ–7/2008, ದಿನಾಂಕ: 21.07.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಷಿಪೋಸಾ ಮತ್ತು ಅಭಿಯೋಗಗಳು)

**ವಿಷಯ :** ಶ್ರೀ ರವಿನಾರಾಯಣ, ಡಿವೈ.ಎಸ್.ಪಿ. ಮತ್ತು ಶ್ರೀ ಎಂ.ಡಿ. ಹುಲಿಮನಿ, ಡಿವೈ.ಎಸ್.ಪಿ. ರವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿಯ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ ಒಇ 218 ಪೊಸಿಪ 2008, ದಿನಾಂಕ 11–8–2008.
2. ಕೆ.ಎ.ಟಿ. ಅರ್ಜಿ ಸಂಖ್ಯೆ: 3948/2008ರಲ್ಲಿ ದಿ: 14–8–2008ರಂದು ನೀಡಿದ ಸೂಚನೆ.
3. ಶ್ರೀ ರವಿನಾರಾಯಣ, ಡಿವೈ.ಎಸ್.ಪಿ. ರವರ ಮನವಿ ದಿನಾಂಕ 13–8–2008.

**ಪ್ರಸ್ತಾವನೆ :**

ಸರ್ಕಾರದ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008 ದಿನಾಂಕ 11–8–2008ರಲ್ಲಿ ಡಿವೈ.ಎಸ್.ಪಿ. (ಸಿವಿಲ್) ವೃಂದದ ಅಧಿಕಾರಿಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾಯಿಸಿದೆ. ಈ ಅಧಿಸೂಚನೆಯಲ್ಲಿ ಶ್ರೀ ರವಿನಾರಾಯಣ, ಡಿವೈ.ಎಸ್.ಪಿ. ಯಾದಗಿರಿ ಉಪ ವಿಭಾಗ ಇವರನ್ನು ಡಿವೈ.ಎಸ್.ಪಿ, ಎ.ಎನ್.ಎಫ್, ಉಡುಪಿ ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಲಾಗಿದೆ. ಹಾಗೂ ಶ್ರೀ ಎಂ.ಡಿ. ಹುಲಿಮನಿ, ಡಿವೈ.ಎಸ್.ಪಿ., ಎ.ಎನ್.ಎಫ್. ಉಡುಪಿ ಇವರನ್ನು ಡಿವೈ.ಎಸ್.ಪಿ.,

ಯಾದಗಿರಿ ಉಪ ವಿಭಾಗ, ಇಲ್ಲಿಗೆ ನೇಮಿಸಲಾಗಿದೆ. ಸದರಿ ವರ್ಗಾವನೆಯ ವಿರುದ್ಧ ಶ್ರೀ ರವಿನಾರಾಯಣ ರವರು ಕೆ.ಎ.ಟಿ.ಯಲ್ಲಿ ಅರ್ಜಿ ಸಂಖ್ಯೆ: 3948/2008 ಸಲ್ಲಿಸಿದ್ದು, ಕೆ.ಎ.ಟಿ.ಯು. ದಿನಾಂಕ 14–8–2008ರಲ್ಲಿ ತೀರ್ಪು ನೀಡಿ ಈ ಕೆಳಗಿನಂತೆ ಆದೇಶಿಸಿದೆ.

1) The application is disposed of;
2) The Cadre Management Authority is directed to consider the Review Application dated 13-8-2008 (original of Annexure-A3) and pass appropriate orders in accordance with law within four weeks from the date a certified copy of this order received by the cadred Management Authority, however, subject to an opportunity of being heard given to the 5th Respondent.
3) Parties are directed to maintain status-quo till then.

ದಿನಾಂಕ 19–7–2008ರಂದು ಮಾನ್ಯ ಗೃಹ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯು ಶ್ರೀ ರವಿನಾರಾಯಣ, ಡಿವೈ.ಎಸ್.ಪಿ., ಯಾದಗಿರಿ ಉಪ ವಿಭಾಗ ರವರು ದಿನಾಂಕ 13–8–2008ರಂದು ಸಲ್ಲಿಸಿರುವ ಮನವಿಯನ್ನು ಸಮಿತಿಯು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 183 ಪೊಸಇ 2008, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2008.**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನಂತೆ ಸರ್ಕಾರವು ಪರಿಶೀಲಿಸಿ ಈಗಾಗಲೇ ಶ್ರೀ ಎಂ.ಡಿ. ಹುಲಿಮನಿ ರವರು ಡಿವೈ.ಎಸ್.ಪಿ., ಯಾದಗಿರಿ ಉಪ ವಿಭಾಗದಲ್ಲಿ ಕರ್ತವ್ಯಕ್ಕೆ ಹಾಜರಾಗಿರುವುದನ್ನು ಗಮನಿಸಿ ಅಧಿಸೂಚನೆ ಸಂಖ್ಯೆ: ಒಇ 218 ಪೊಸಿಪ 2008, ದಿನಾಂಕ 11–8–2008ರಲ್ಲಿರುವಂತೆ ಸ್ಥಿರೀಕರಿಸಿ ಈ ಕೆಳಗಿನಂತೆ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಹುದ್ದೆ ಶ್ರೀಯುತರು: | ವರ್ಗಾಯಿಸಿ ಸ್ಥಳನಿಯುಕ್ತಿಗೊಳಿಸಿದ ಹುದ್ದೆ |
|---|---|---|
| 1 | ರವಿನಾರಾಯಣ, ಡಿವೈ.ಎಸ್.ಪಿ. ಯಾದಗಿರಿ ಉಪ ವಿಭಾಗ | ಡಿವೈ.ಎಸ್.ಪಿ., ಎ.ಎನ್.ಎಫ್., ಉಡುಪಿ ಶ್ರೀ ಎಂ.ಡಿ. ಹುಲಿಮನಿ ಇವರ ವರ್ಗಾವಣೆಯಿಂದ ತೆರವಾದ ಹುದ್ದೆ |
| 2 | ಎಂ.ಡಿ. ಹುಲಿಮನಿ, ಡಿವೈ.ಎಸ್.ಪಿ., ಎ.ಎನ್.ಎಫ್., ಉಡುಪಿ | ಡಿವೈ.ಎಸ್.ಪಿ., ಯಾದಗಿರಿ ಉಪ ವಿಭಾಗ ಶ್ರೀ ರವಿನಾರಾಯಣ ಇವರ ವರ್ಗಾವಣೆಯಿಂದ ತೆರವಾದ ಹುದ್ದೆ |

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಯವರ ಕಚೇರಿಯ ಟಿಪ್ಪಣಿ ಸಂಖ್ಯೆ: ಪಿಎಸ್ ಸಿಎಂ/ಎಫ್/1496/2008, ದಿನಾಂಕ 20–8–2008ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು)

**ವಿಷಯ:** ಶ್ರೀಮತಿ ಬಿ. ನಾಗಸುಂದ್ರಮ್ಮ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ.(ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ವೀರಾಜಪೇಟೆ, ಇವರ ಜನ್ಮ ದಿನಾಂಕವನ್ನು ಒಪ್ಪುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 193 ಪಿಪಿಇ 2003, ದಿನಾಂಕ:06.05.2004.
2. ಸದರಿ ಅಧಿಕಾರಿಯ ಮನವಿ ದಿನಾಂಕ: 06.06.2006.
3. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಕೇಂಸ/ವಿವ/05/2007–08, ದಿನಾಂಕ:08.08.2007.

**ಸರ್ಕಾರದ ಆದೇಶ ಸಂಖ್ಯೆ: ಒಇ 413 ಪಿಪಿಇ 2007, ಬೆಂಗಳೂರು, ದಿನಾಂಕ: 04ನೇ ಸೆಪ್ಟೆಂಬರ್ 2008.**

ಮೇಲೆ ಓದಲಾದ (1)ರಲ್ಲಿ ಸರ್ಕಾರದ ಆದೇಶದ ಕ್ರ.ಸಂ:14ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ನೇಮಕಗೊಂಡ ಶ್ರೀಮತಿ ಬಿ. ನಾಗಸುಂದ್ರಮ್ಮ, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ

ಸಿ.ಜೆ.(ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ವೀರಾಜಪೇಟೆ, ಇವರು ದಿನಾಂಕ: 17.05.2004ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ಎಸ್.ಎಸ್.ಎಲ್.ಸಿ ಮೂಲ (ದ್ವಿತೀಯ ಪ್ರತಿ) ಅಂಕಪಟ್ಟಿಯಲ್ಲಿ ಇವರ ಜನ್ಮ ದಿನಾಂಕವನ್ನು 20.02.61 ಎಂದು ನಮೂದಿಸಿದ್ದು, ಸದರಿ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ)(ತಿದ್ದುಪಡಿ) ಕಾಯ್ದೆ 1982ರ ಕಲಂ3ರ ಉಪಕಲಂ–2ರ ಅನ್ವಯ ಶ್ರೀಮತಿ ಬಿ. ನಾಗಸುಂದ್ರಮ್ಮ, ಇವರ **ಜನ್ಮ ದಿನಾಂಕ: 20.02.1961 (ಇಪ್ಪತ್ತು – ಫೆಬ್ರವರಿ – ಸಾವಿರದೊಂಬೈನೂರ ಆರವತ್ತೊಂದು)** ಎಂದು ಸರ್ಕಾರವು ಒಪ್ಪಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಷಿಪೋಸ ಮತ್ತು ಅಭಿಯೋಗಗಳು)

**ವಿಷಯ:** ಶ್ರೀಮತಿ ಆರ್.ಟಿ. ಆಶಾ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಿತ್ರದುರ್ಗ, ಇವರ ಜನ್ಮ ದಿನಾಂಕವನ್ನು ಒಪ್ಪುವ ಬಗ್ಗೆ.

ಓದಲಾಗಿದೆ:
1. ಸರ್ಕಾರದ ಅಧಿಸೂಚನೆ ಸಂ: ಲಾ 56 ಪಿಪಿಇ 99, ದಿನಾಂಕ:12.01.2000.
2. ಸದರಿ ಅಧಿಕಾರಿಯ ಮನವಿ ದಿನಾಂಕ: 13.12.2007
3. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ:ಡಿಪಿಎನ್/ಕೇಂಸ/ವಿವ/39/2007–08, ದಿನಾಂಕ:14.11.2007.

**ಸರ್ಕಾರದ ಆದೇಶ ಸಂಖ್ಯೆ: ಒಇ 351 ಪಿಪಿಇ 2007, ಬೆಂಗಳೂರು, ದಿನಾಂಕ: 04ನೇ ಸೆಪ್ಟೆಂಬರ್ 2008.**

ಮೇಲೆ ಓದಲಾದ (1)ರಲ್ಲಿ ಸರ್ಕಾರದ ಆದೇಶದ ಕ್ರ.ಸಂ:9ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ನೇಮಕಗೊಂಡ ಶ್ರೀಮತಿ ಆರ್.ಟಿ. ಆಶಾ, ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಿತ್ರದುರ್ಗ, ಇವರು ದಿನಾಂಕ:21.01.2000ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ಎಸ್.ಎಸ್.ಎಲ್.ಸಿ ಮೂಲ ಅಂಕಪಟ್ಟಿಯಲ್ಲಿ ಇವರ ಜನ್ಮ ದಿನಾಂಕವನ್ನು 10.09.64 ಎಂದು ನಮೂದಿಸಿದ್ದು, ಸದರಿ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ)(ತಿದ್ದುಪಡಿ) ಕಾಯ್ದೆ 1982ರ ಕಲಂ3ರ ಉಪಕಲಂ–2ರ ಅನ್ವಯ ಶ್ರೀಮತಿ ಆರ್.ಟಿ. ಆಶಾ, ಇವರ **ಜನ್ಮ ದಿನಾಂಕ: 10.09.1964(ಹತ್ತು– ಸೆಪ್ಟಂಬರ್ – ಸಾವಿರದೊಂಬೈನೂರ ಆರವತ್ತನಾಲ್ಕು)** ಎಂದು ಸರ್ಕಾರವು ಒಪ್ಪಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಷಿಪೋಸಾ ಮತ್ತು ಅಭಿಯೋಗಗಳು)

**ವಿಷಯ :** ಶ್ರೀ ಪ್ರಶಾಂತ್ ಎಸ್ ತೋರಗಲ್, ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ಹುಬ್ಬಳ್ಳಿ, ಇವರ ಜನ್ಮ ದಿನಾಂಕವನ್ನು ಒಪ್ಪುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ. ಲಾ 229 ಪಿಪಿಇ 2003, ದಿನಾಂಕ 4–12–2003.
2. ಸದರಿ ಅಧಿಕಾರಿಯ ಮನವಿ ದಿನಾಂಕ 28/30–3–2007.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ. ಡಿಪಿಎನ್/ಕೇಂಸ/ವಿವ/40/2007–08, ದಿನಾಂಕ 14–11–2007.

**ಸರ್ಕಾರದ ಆದೇಶ ಸಂಖ್ಯೆ: ಒಇ 350 ಪಿಪಿಇ 2007, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2008.**

ಮೇಲೆ ಓದಲಾದ (1)ರಲ್ಲಿ ಸರ್ಕಾರದ ಆದೇಶದ ಕ್ರ.ಸಂ. 3ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡ ಶ್ರೀ ಪ್ರಶಾಂತ್ ಎಸ್. ತೋರಗಲ್, ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ಹುಬ್ಬಳ್ಳಿ, ಇವರು ದಿನಾಂಕ 6–12–2003ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಕರ್ನಾಟಕ ರಾಜ್ಯ ಪ್ರೌಢ

ಶಿಕ್ಷಣ ಪರೀಕ್ಷಾ ಮಂಡಳಿಯವರು ಎಸ್.ಎಸ್.ಎಲ್.ಸಿ. ಮೂಲ ಅಂಕಪಟ್ಟಿಯಲ್ಲಿ ಇವರ ಜನ್ಮ ದಿನಾಂಕವನ್ನು 1–3–69 ಎಂದು ನಮೂದಿಸಿದ್ದು, ಸದರಿ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) (ತಿದ್ದುಪಡಿ) ಕಾಯ್ದೆ 1982ರ ಕಲಂ 3 ರ ಉಪಕಲಂ–2ರ ಅನ್ವಯ ಶ್ರೀ ಪ್ರಶಾಂತ್ ಎಸ್. ತೋರಗಲ್ ಇವರ ಜನ್ಮ ದಿನಾಂಕ 1–3–69 (ಒಂದು – ಮಾರ್ಚ್ – ಸಾವಿರದೊಂಬೈನೂರ ಅರವತ್ತೊಂಬತ್ತು) ಎಂದು ಸರ್ಕಾರವು ಒಪ್ಪಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಪಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎನ್.ಎಸ್. ಪೂಜಾರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಶಹಾಬಾದ್, ಇವರ ಜನ್ಮ ದಿನಾಂಕವನ್ನು ಒಪ್ಪುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ: ಲಾ 229 ಪಿಪಿಇ 2003, ದಿನಾಂಕ: 04.12.2003.
2. ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಕೇಂಸ/ವಿವ/61(ಎ)/2001–02, ದಿನಾಂಕ: 30/31.05.2007.

**ಸರ್ಕಾರದ ಆದೇಶ ಸಂಖ್ಯೆ: ಒಇ 349 ಪಿಪಿಇ 2007, ಬೆಂಗಳೂರು, ದಿನಾಂಕ: 04ನೇ ಸೆಪ್ಟೆಂಬರ್ 2008.**

ಮೇಲೆ ಓದಲಾದ (1)ರಲ್ಲಿ ಸರ್ಕಾರದ ಆದೇಶದ ಕ್ರ.ಸಂ:16ರಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ನೇಮಕಗೊಂಡ ಶ್ರೀ ಎನ್.ಎಸ್. ಪೂಜಾರಿ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಶಹಾಬಾದ್, ಇವರು ದಿನಾಂಕ: 08.12.2003ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ಎಸ್.ಎಸ್.ಎಲ್.ಸಿ ಮೂಲ ಅಂಕಪಟ್ಟಿಯಲ್ಲಿ ಇವರ ಜನ್ಮ ದಿನಾಂಕವನ್ನು 26.10.62 ಎಂದು ನಮೂದಿಸಿದ್ದು, ಸದರಿ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) (ತಿದ್ದುಪಡಿ) ಕಾಯ್ದೆ 1982ರ ಕಲಂ3ರ ಉಪಕಲಂ–2ರ ಅನ್ವಯ ಶ್ರೀ ಎನ್.ಎಸ್. ಪೂಜಾರಿ, ಇವರ **ಜನ್ಮ ದಿನಾಂಕ: 26.10.62 (ಇಪ್ಪತ್ತಾರು – ಅಕ್ಟೋಬರ್ – ಸಾವಿರದೊಂಬೈನೂರ ಅರವತ್ತೆರಡು)** ಎಂದು ಸರ್ಕಾರವು ಒಪ್ಪಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಪಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ರಮೇಶ್. ಬಿ. ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಜಗಳೂರು, ಅವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 97 ಪಿಪಿಇ 97 ದಿನಾಂಕ: 29.01.1998.
2. ಸರ್ಕಾರದ ಆದೇಶದ ಸಂ. ಒಇ 573 ಪಿಪಿಇ 2005, ದಿನಾಂಕ: 12.07.2006.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 25.02.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/413/2007–08, ದಿನಾಂಕ: 22.04.2007.

**ಪ್ರಸ್ತಾವನೆ:**

ಶ್ರೀ ರಮೇಶ್. ಬಿ. ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಜಗಳೂರು, ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ: 29.01.1998, ಕ್ರ.ಸಂ: 14ರ ಅನ್ವಯ

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 07.02.1998ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ: 22.07.59 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ: 12.07.2006ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ:22.07.1959 ಆಗಿದ್ದು, ಅವರು ದಿನಾಂಕ:07.02.1998ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 38ವರ್ಷಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುತ್ತಾರೆ. ಆದ್ದರಿಂದ, ನಿಯಮಾನುಸಾರ ಗರಿಷ್ಠ 4 ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಆದೇಶಸಿಬೇಕೆಂದು ಮತ್ತು ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲರಿಗೆ ಕಳುಹಿಸಿಕೊಡಬೇಕೆಂದು ಮನವಿಯಲ್ಲಿ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು, ಶ್ರೀ ರಮೇಶ್. ಬಿ. ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಜಗಳೂರು, ಇವರು ದಿನಾಂಕ: 07.02.1998 ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಇವರ ಜನ್ಮ ದಿನಾಂಕ: 22.07.1959 ಆಗಿರುತ್ತದೆ. ಸದರಿ ಅಧಿಕಾರಿಯು 38 ವರ್ಷ 06. 15 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ಪ್ರಕಾರ ಗರಿಷ್ಟ ನಾಲ್ಕು ವರ್ಷಗಳ ಸೇವೆಯನ್ನು ನಿವೃತ್ತಿ ವೇತನಕ್ಕಾಗಿ, ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಶಿಫಾರಸ್ಸನ್ನು ಮಾಡಿರುತ್ತಾರೆ ಹಾಗೂ ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 210 ಪಿಪಿಇ 2008, ಬೆಂಗಳೂರು, ದಿನಾಂಕ: 04ನೇ ಸೆಪ್ಟೆಂಬರ್ 2008.**

ಕೆ.ಸಿ.ಎಸ್.ಆರ್ಸ್ ನಿಯಮಾವಳಿಯ ನಿಯಮ 247(ಎ) ರೀತ್ಯ ಶ್ರೀಯುತ ರಮೇಶ್.ಬಿ ರವರಿಗೆ 4 (ನಾಲ್ಕು) ವರ್ಷಗಳ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: 659 ವೆಚ್ಚ–7/2008, ದಿನಾಂಕ 16.07.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ :** ಶ್ರೀ ಆರ್.ಎನ್. ಮಠ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಬಾಗಲಕೋಟೆ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ II ಸಂ: ಲಾ 161 ಪಿಪಿಇ 86, ದಿನಾಂಕ 24–7–1989.
2. ಸರ್ಕಾರದ ಪತ್ರದ ಸಂ. ಲಾ 278 ಪಿಪಿಇ 90, ದಿನಾಂಕ 13–3–91.
3. ಸದರಿ ಅಧಿಕಾರಿಯವರ ಮನವಿ ದಿನಾಂಕ 27–3–2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ. ಡಿಪಿಎನ್/ಲೆಕ್ಕ–1/13/2008–09, ದಿನಾಂಕ 6–6–2008.

**ಪ್ರಸ್ತಾವನೆ :**

ಶ್ರೀ ಆರ್.ಎನ್. ಮಠ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಬಾಗಲಕೋಟೆ, ಇವರು ಮೇಲೆ ಓದಲಾದ (1)ರ ಸಕಾರದ ಅಧಿಸೂಚನೆ ದಿನಾಂಕ: 24–7–1989, ಕ್ರ.ಸಂ. 12ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ 3–8–1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರ ಜನ್ಮ ದಿನಾಂಕ 31-10-1952 ಆಗಿದ್ದು, ಸದರಿ ಜನ್ಮ ದಿನಾಂಕವನ್ನು ಮೇಲೆ ಓದಲಾದ (2)ರ ದಿನಾಂಕ 13-3-91ರ ಸರ್ಕಾರದ ಪತ್ರದಲ್ಲಿ ಒಪ್ಪಲಾಗಿದೆ.

ಸದರಿ ಅಧಿಕಾರಿಯವರು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ ಸದರಿಯವರ ಜನ್ಮ ದಿನಾಂಕ 31-10-1952 ಆಗಿದ್ದು, ಅವರು ದಿನಾಂಕ 3-8-1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ಸದರಿಯವರು 36 ವರ್ಷ 9 ತಿಂಗಳು ವಯಸ್ಸಿನಲ್ಲಿ ಸಕಾರಿ ಸೇವೆಗೆ ಸೇರಿರುತ್ತಾರೆ. ಆದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರ ಪ್ರಕಾರ 30 ವರ್ಷ ಮೀರಿದ ನಂತರ ಸಕಾರಿ ಸೇವೆಗೆ ಸೇರಿದ್ದಲ್ಲಿ, ಸರ್ಕಾರಿ ಸೇವೆಗೆ ಸೇರಿದಾಗ ಆದ ವಯಸ್ಸು ಮತ್ತು 30 ವರ್ಷ ಇವೆರಡರ ವ್ಯತ್ಯಾಸದ ಅವಧಿಯನ್ನು ಗರಿಷ್ಟ 8 ವರ್ಷಗಳವರೆಗೆ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಿಕೊಳ್ಳುವ ಅವಕಾಶವಿರುತ್ತದೆಂದು ಆದ್ದರಿಂದ 6 ವರ್ಷ 9 ತಿಂಗಳ ಸೇವೆಯನ್ನು ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯನ್ನಾಗಿ ಸೇರ್ಪಡೆ ಮಾಡಲು ಆದೇಶಿಸುವಂತೆ ಕೋರಿ ಸದರಿಯವರು ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು, ಶ್ರೀ ಆರ್.ಎನ್. ಮಠ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಬಾಗಲಕೋಟೆ, ಅವರು ದಿನಾಂಕ 3-8-1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ವರದಿ ಮಾಡಿಕೊಂಡಿರುತ್ತಾರೆ. ಅವರ ಜನ್ಮ ದಿನಾಂಕ 31-10-1952 ಆಗಿರುತ್ತದೆ. ಸದರಿ ಅಧಿಕಾರಿಯು 36 ವರ್ಷ 9 ತಿಂಗಳು 2 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದ್ದು, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)ರ ಪ್ರಕಾರ ನಿವೃತ್ತಿ ವೇತನಕ್ಕೆ ನಾಲ್ಕು ವರ್ಷದ ಸೇವೆಯನ್ನು ಹೆಚ್ಚುವರಿಯಾಗಿ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಶಿಫಾರಸ್ಸನ್ನು ಮಾಡಿರುತ್ತಾರೆ ಹಾಗೂ ಈ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಆದುದರಿಂದ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 260 ಪಿಪಿಇ 2008, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2008.**

ಶ್ರೀ ಆರ್.ಎನ್. ಮಠ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ) ರೀತ್ಯ ನಾಲ್ಕು ವರ್ಷಗಳ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಸರ್ಕಾರವು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. 796 ವೆಚ್ಚ-7/ 2008, ದಿನಾಂಕ 16-7-2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1277

**ಪ್ರಕಾಶ್ ಎಸ್. ಭೂಸನೂರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ
ಕಾಫಿಪೋಸಾ ಮತ್ತು ಅಭಿಯೋಗಗಳು)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ 2008-09ನೇ ಸಾಲಿನ ಮೊದಲನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 152 ಕೆಎಂಯು 2007, ದಿ: 20-2-2008.

2. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ/ಎಸಿಟಿ/1/42/2007-08, ದಿನಾಂಕ 31-5-2008.

**ಪ್ರಸ್ತಾವನೆ :**

ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರದ ಸಿಬ್ಬಂದಿ ವೇತನಕ್ಕಾಗಿ 2007-08ನೇ ಸಾಲಿಗೆ ನಿಗದಿಪಡಿಸಿದ ರೂ. 26 ಲಕ್ಷಗಳ ಪೈಕಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ. 8.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿತ್ತು. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಪ್ರಾಧಿಕಾರದ ಆಯುಕ್ತರು ಬಿಡುಗಡೆ ಮಾಡಿದ ಹಣಕ್ಕೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿದ್ದು, ಪ್ರಾಧಿಕಾರಕ್ಕೆ ಮೊದಲನೇ ಕಂತಿನ ಹಣ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 110 ಕೆಎಂಯು 2008, ಬೆಂಗಳೂರು, ದಿನಾಂಕ: 2ನೇ ಆಗಸ್ಟ್ 2008.**

ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರದ 2008–09ನೇ ಸಾಲಿನ ಸಿಬ್ಬಂದಿ ವೇತನಕ್ಕಾಗಿ ನಿಗದಿಪಡಿಸಿದ ರೂ. 27.30 ಲಕ್ಷಗಳಲ್ಲಿ ಮೊದಲನೇ ಕಂತಿನ ಮೊತ್ತ ರೂ. 9.00 ಲಕ್ಷಗಳನ್ನು (ರೂಪಾಯಿ ಒಂಭತ್ತು ಲಕ್ಷಗಳು ಮಾತ್ರ) ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಪೇಯೀಸ್ ರಸೀತ್ ಮೂಲಕ ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–18 (ಯೋಜನೇತರ) 101ರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರೊಡನೆ ಸಮಾಲೋಚಿಸಿ ಇಲಾಖೆಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1206

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅರ್ಜಿ ಸಂಖ್ಯೆ: 4123/2007 ರಲ್ಲಿನ ದಿ: 29–11–2007ರ ತೀರ್ಪನ್ನು ಅನುಷ್ಠಾನಗೊಳಿಸಿ ಶ್ರೀ ಎಲ್.ಕೆ. ದೇಶಪಾಂಡೆ, ಅಧೀಕ್ಷಕರು, ಸರ್ಕಾರಿ ಬಾಲಮಂದಿರ (ಹಿರಿಯ) ಬಳ್ಳಾರಿ, ಇವರನ್ನು ನಿರೂಪಣಾಧಿಕಾರಿ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿ ಸ್ಥಳ ನಿಯುಕ್ತಿಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಕಇ/209/ಎಸ್‌ಜೆಡಿ 1994, ದಿ: 9–3–1995.
2. ಪ್ರಧಾನ ಸೆಷನ್ ನ್ಯಾಯಾಲಯ, ರಾಯಚೂರು ರಲ್ಲಿನ ಪ್ರಕರಣ ಸಂಖ್ಯೆ 1/1996ರಲ್ಲಿ ಮಾನ್ಯ ನ್ಯಾಯಾಲಯವು ದಿ: 20–1–1998 ರಂದು ನೀಡಿರುವ ಅವಾರ್ಡ್
3. ಉಚ್ಚ ನ್ಯಾಯಾಲಯದಲ್ಲಿನ ಕ್ರಿಮಿನಲ್ ಮೇಲ್ಮನವಿ ಸಂಖ್ಯೆ: 487/1998ರಲ್ಲಿ ಮಾನ್ಯ ನ್ಯಾಯಾಲಯವು ದಿ: 27–1–2004 ರಂದು ನೀಡಿರುವ ತೀರ್ಪು.
4. ದಿ: 9–6–2004ರಂದು ನಡೆದ ಬಡ್ತಿ ಸಮಿತಿಯ ನಡವಳಿ.
5. ಸರ್ಕಾರದ ಅಧಿಸೂಚನೆ ಸಂಖ್ಯೆ ಮಮಇ 324 ಎಸ್‌ಜೆಡಿ 2004, ದಿ: 17–11–04
6. ಕರ್ನಾಟಕ ಲೋಕಾಯುಕ್ತ ಕಛೇರಿಯ ಪತ್ರ ಸಂಖ್ಯೆ ದೂರು/ಉಪಲೋಕ್/ಜಿಎಲ್‌ಬಿ/396/2007, ದಿ: 1–8–2007.
7. ಸರ್ಕಾರದ ಅಧಿಸೂಚನೆ ಸಂಖ್ಯೆ: ಮಮಇ 358 ಎಸ್‌ಜೆಡಿ 2007, ದಿ: 17–8–2007.
8. ಕೆ.ಎ.ಟಿ. ಸಂಖ್ಯೆ: 4123/2007ರಲ್ಲಿ ಮಾನ್ಯ ನ್ಯಾಯಮಂಡಳಿಯು ದಿ: 29–11–2007ರಂದು ನೀಡಿರುವ ತೀರ್ಪು.
9. ಕಾನೂನು ಕೋಶದ ಅಧಿಕೃತ ಜ್ಞಾಪನ ಸಂಖ್ಯೆ: ಡಬ್ಲ್ಯೂಡಿಸಿ/288/ಎಲ್‌ಸಿ 2007, ದಿನಾಂಕ: 28–3–2008.
10. ಕೆ.ಎ.ಟಿ. ನಿಂದನಾ ಅರ್ಜಿ ಸಂಖ್ಯೆ: 47/2008.
11. ಸರ್ಕಾರದ ಪತ್ರ ಸಂಖ್ಯೆ ಮಮಇ 470 ಎಸ್‌ಜೆಡಿ 2007, ದಿ: 1–4–2008.
12. ಸರ್ಕಾರಿ ವಕೀಲರ ಪತ್ರ ಸಂಖ್ಯೆ: 2370/ಎಜಿ/ಕೆ.ಎ.ಟಿ./08, ದಿ: 2–6–2008.

**ಪ್ರಸ್ತಾವನೆ :**

ಶ್ರೀ ಎಲ್.ಕೆ. ದೇಶಪಾಂಡೆ ನಿರೂಪಣಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಳ್ಳಾರಿ ಇವರು ಮಾನ್ವಿಯ ಶಿಶು ಅಭಿವೃದ್ಧಿ ಯೋಜನಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಸಮಯದಲ್ಲಿ ಅಂಗನವಾಡಿ ಕಾರ್ಯಕರ್ತೆಯರ ಹುದ್ದೆಗೆ ನೇಮಕಾತಿ ನೀಡಲು ಈ ಈರಣ್ಣ ಬೆಟ್ಟದೂರು ಗ್ರಾಮ, ಮಾನ್ವಿ ತಾಲ್ಲೂಕು ಇವರಿಂದ ದಿ: 30–9–1993 ರಂದು ರೂ. 500/– ಲಂಚ ಸ್ವೀಕರಿಸುತ್ತಿದ್ದಾಗ, ಲೋಕಾಯುಕ್ತರ ಬಲೆಗೆ ಸಿಲುಕಿದ್ದು, ಮೇಲೆ ಓದಲಾದ

ಕ್ರಮ ಸಂಖ್ಯೆ (1)ರ ದಿ: 9–3–1995ರ ಆದೇಶದಲ್ಲಿ ಸದರಿಯವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಪ್ರಾಸಿಕ್ಯೂಟ್ ಮಾಡಲು ಸರ್ಕಾರವು ಮಂಜೂರಾತಿ ನೀಡಿದೆ. ಅದರಂತೆ ರಾಯಚೂರು ಲೋಕಾಯುಕ್ತ ಕಛೇರಿಯು ಪ್ರಧಾನ ಸೆಷನ್ ನ್ಯಾಯಾಲಯ ರಾಯಚೂರು, ಇಲ್ಲಿ ಸ್ಪೆಷಲ್ ಕೇಸ್ ಸಂಖ್ಯೆ: 1/1996ನ್ನು ದಾಖಲಿಸಿದ್ದು, ಮಾನ್ಯ ನ್ಯಾಯಾಲಯವು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 20–1–1998ರಂದು ಸದರಿ ಮೊಕದ್ದಮೆಯನ್ನು ವಿಲೇವಾರಿ ಮಾಡಿ ಶ್ರೀ ಎಲ್.ಕೆ. ದೇಶಪಾಂಡೆ ರವರನ್ನು ದೋಷಮುಕ್ತರನ್ನಾಗಿ ಘೋಷಿಸಿದ್ದು, ಸದರಿ ತೀರ್ಪಿನ ವಿರುದ್ಧ ಉಚ್ಛ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೇಲ್ಮನವಿ ಸಂಖ್ಯೆ: 487/1998ನ್ನು ಹೂಡಲಾಗಿ, ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಮಾನ್ಯ ನ್ಯಾಯಾಲಯವು ದಿ: 27–1–2004ರಂದು ವಿಚಾರಣೆ ನಡೆಸಿ ಜಿಲ್ಲಾ ನ್ಯಾಯಾಲಯದ ತೀರ್ಪನ್ನು ಎತ್ತಿ ಹಿಡಿದು ಅಪೀಲನ್ನು ವಜಾಗೊಳಿಸಿರುತ್ತದೆ. ಸದರಿ ಪ್ರಕರಣವು ಲೋಕಾಯುಕ್ತದಲ್ಲಿ ಇತ್ಯರ್ಥವಾಗದೆ ಬಾಕಿ ಉಳಿದಿದ್ದು, ಈ ನಡುವೆ ಇಲಾಖೆಯಲ್ಲಿ ಪರಿವೀಕ್ಷಣಾಧಿಕಾರಿ ದರ್ಜೆ–1ರ ಅಧಿಕಾರಿಗಳಿಗೆ ಸಹಾಯಕ ನಿರ್ದೇಶಕರ/ಉನ್ನತೀಕರಿಸಲಾದ ಮಹಿಳಾ ಮತ್ತು ಮಕ್ಕಳ ಅಧಿಕಾರಿ ಹುದ್ದೆಗೆ ಕರ್ನಾಟಕ ನಾಗರೀಕ ಸೇವಾ ನಿಯಮ 32ರಡಿಯಲ್ಲಿ ಇರಿಸುವ ಬಗ್ಗೆ, ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿ: 9–4–2004ರಂದು ಇಲಾಖಾ ಬಡ್ತಿ ಸಮಿತಿ ಜರುಗಿದ್ದು, ಶ್ರೀ ಎಲ್.ಕೆ. ದೇಶಪಾಂಡೆ ರವರ ವಿರುದ್ಧ ಲೋಕಾಯುಕ್ತರಲ್ಲಿ ಇಲಾಖಾ ವಿಚಾರಣೆ ಬಾಕಿ ಇರುವುದನ್ನು ಗಮನಿಸಿ ಸದರಿಯವರ ಪ್ರಕರಣವನ್ನು ಸೀಲ್ಡ್ ಕವರ್‌ನಲ್ಲಿ ಇಡಲು ಸಮಿತಿ ತೀರ್ಮಾನಿಸಿತು. ಇಲಾಖಾ ಬಡ್ತಿ ಸಮಿತಿಯ ಶಿಫಾರಸ್ಸಿನಂತೆ ಸರ್ಕಾರವು ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ದಿ: 17–11–2004ರ ಅಧಿಸೂಚನೆಯಲ್ಲಿ ಶ್ರೀ ಎಲ್.ಕೆ. ದೇಶಪಾಂಡೆ ಇವರ ಹೆಸರನ್ನು ಬಡ್ತಿಗೆ ಪರಿಗಣಿಸದೇ ಇವರಿಗಿಂತ ಕಿರಿಯರಾದ ಶ್ರೀ ಹೆಚ್. ಕೃಷ್ಣ ಇವರಿಗೆ ದಿ: 17–11–2004 ರಿಂದ ಜಾರಿಗೆ ಬರುವಂತೆ ಉನ್ನತೀಕರಿಸಿದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ ಹುದ್ದೆಗೆ ನಿಯಮ 32ರಡಿ ಸ್ವತಂತ್ರ ಪ್ರಭಾರದಲ್ಲಿರಿಸಲು ಪರಿಗಣಿಸಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ದಿ: 1–8–2007ರ ಲೋಕಾಯುಕ್ತ ಕಛೇರಿಯ ಪತ್ರದಲ್ಲಿ ಶ್ರೀ ಎಲ್.ಕೆ. ದೇಶಪಾಂಡೆ ಇವರ ವಿರುದ್ಧದ ಲಂಚ ಸ್ವೀಕರಿಸಿದ ಪ್ರಕರಣವನ್ನು ಕಾನೂನು ಸಲಹೆ–4 ಶಾಖೆಗೆ ದಿ: 7–6–2007ರಂದು ಪ್ರಾಥಮಿಕ ತನಿಖೆಗೆ ವಹಿಸಿರುವುದಾಗಿ ವರದಿಯಾಗಿದೆ. ನಂತರ ಮೇಲೆ ಓದಲಾದ ಕ್ರಮ ಸಂಖ್ಯೆ (7)ರ ದಿ: 17–8–2007ರ ಅಧಿಸೂಚನೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮ 32ರಡಿಯಲ್ಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಹೆಚ್. ಕೃಷ್ಣ ರವರಿಗೆ ಭವಿಷ್ಯವರ್ತಿಯಾಗಿ ದಿ: 17–8–2007 ರಿಂದ ಜಾರಿಗೆ ಬರುವಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ ಹುದ್ದೆಗೆ ಬಡ್ತಿ ನೀಡಿರುತ್ತದೆ. ಸರ್ಕಾರವು ದಿ: 17–8–2007ರಂದು ಹೊರಡಿಸಿರುವ ಅಧಿಸೂಚನೆಯನ್ನು ಪ್ರಶ್ನಿಸಿ ಶ್ರೀ ಎಲ್.ಕೆ. ದೇಶಪಾಂಡೆ ರವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ 4123/2007ನ್ನು ಹೂಡಿದ್ದು, ಮಾನ್ಯ ನ್ಯಾಯಮಂಡಳಿಯು ಸದರಿ ಅರ್ಜಿಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (8)ರ 29–11–2007ರಂದು ವಿಚಾರಣೆ ನಡೆಸಿ ಜಿಲ್ಲಾ ನ್ಯಾಯಾಲಯ ಈಗಾಗಲೇ ಶ್ರೀ ಎಲ್.ಕೆ. ದೇಶಪಾಂಡೆ ರವರನ್ನು ದೋಷಮುಕ್ತರನ್ನಾಗಿಸಿದ್ದು, ಹಾಗೂ ಸದರಿ ಜಿಲ್ಲಾ ನ್ಯಾಯಾಲಯದ ತೀರ್ಪನ್ನು ಉಚ್ಛ ನ್ಯಾಯಾಲಯವು ಎತ್ತಿ ಹಿಡಿದಿರುವ ಹಿನ್ನೆಲೆಯಲ್ಲಿ ಅರ್ಜಿದಾರರ ಮನವಿಯನ್ನು ಎರಡು ತಿಂಗಳ ಒಳಗಾಗಿ ವಿಲೇಗೊಳಿಸಿ ಸದರಿಯವರನ್ನು ಗ್ರೂಪ್ 'ಎ' ಹುದ್ದೆಯಲ್ಲಿ (ಕಿರಿಯ ವೇತನ ಶ್ರೇಣಿ) ನಿಯಮ 32ರಡಿ ಸ್ವತಂತ್ರ ಪ್ರಭಾರದಲ್ಲಿರಿಸಿ ಆದೇಶ ಹೊರಡಿಸಿರುವಂತೆ ಸೂಚಿಸಿರುತ್ತದೆ. ಸದರಿ ತೀಪು ಮೇಲ್ಮನವಿಗೆ ಅರ್ಹ ಪ್ರಕರಣವಲ್ಲವೆಂದು ಕಾನೂನು ಕೋಶದ ಮುಖ್ಯಸ್ಥರು ಮೇಲೆ ಓದಲಾದ ಕ್ರಮ ಸಂಖ್ಯೆ (9)ರ ದಿ: 28–3–2008ರ ಅಧಿಕೃತ ಜ್ಞಾಪನದಲ್ಲಿ ತಿಳಿಸಿರುತ್ತಾರೆ. ಈ ನಡುವೆ ಶ್ರೀ ಎಲ್.ಕೆ. ದೇಶಪಾಂಡೆ ರವರು ಕೆ.ಎ.ಟಿ. ಅರ್ಜಿ ಸಂಖ್ಯೆ 4123/2007ರಲ್ಲಿ ಮಾನ್ಯ ನ್ಯಾಯಮಂಡಳಿಯು ದಿ: 29–11–2007 ರಂದು ನೀಡಿರುವ ತೀರ್ಪನ್ನು ಅನುಷ್ಠಾನಗೊಳಿಸಿರುವುದಿಲ್ಲವೆಂದು ಆರೋಪಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (10)ರಲ್ಲಿ ಕೆ.ಎ.ಟಿ.ಯಲ್ಲಿ ನ್ಯಾಯಾಲಯದ ನಿಂದನಾ ಅರ್ಜಿ ಸಂಖ್ಯೆ 47/2008ನ್ನು ಹೂಡಿರುತ್ತಾರೆ. ಶ್ರೀ ಎಲ್.ಕೆ. ದೇಶಪಾಂಡೆ ಅಧೀಕ್ಷಕರು ಇವರ ವಿರುದ್ಧದ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತರವರು ಪುನಃ ತೆರೆದು (Respondent) ಹೊಸದಾಗಿ ತನಿಖೆ ನಡೆಸಲು ಪ್ರಕರಣವನ್ನು ಪ್ರಾಥಮಿಕ ತನಿಖೆಗಾಗಿ ಸಹಾಯಕ ನಿಬಂಧಕರು ಕಾನೂನು ಸಲಹೆ–4, ಕರ್ನಾಟಕ ಲೋಕಾಯುಕ್ತ ಕಛೇರಿ, ಇವರಿಗೆ ವಹಿಸಿರುವ ಹಿನ್ನೆಲೆಯಲ್ಲಿ ಮಾನ್ಯ ನ್ಯಾಯಮಂಡಳಿಯು ದಿ: 29–11–2007ರಂದು ನೀಡಿರುವ ತೀರ್ಪನ್ನು ಅನುಷ್ಠಾನಗೊಳಿಸಲು ಕಷ್ಟಸಾಧ್ಯವೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (11)ರ ದಿ: 1–4–2008ರ ಪತ್ರದಲ್ಲಿ ಸರ್ಕಾರಿ ವಕೀಲರಿಗೆ ತಿಳಿಸಲಾಗಿದೆ. ಆದರೆ ಸರ್ಕಾರದ ನಿಲುವನ್ನು ನ್ಯಾಯಮಂಡಳಿಯು ಒಪ್ಪಿರುವುದಿಲ್ಲವೆಂದು ಸರ್ಕಾರಿ ವಕೀಲರು ಮೌಖಿಕವಾಗಿ ವರದಿ ಮಾಡಿರುತ್ತಾರೆ. ಸದರಿ ನಿಂದನಾ ಪ್ರಕರಣವು ವಿಚಾರಣೆಯ ಅಂತಿಮ ಘಟ್ಟದಲ್ಲಿದ್ದು, ವಿಚಾರಣೆಯನ್ನು ಎರಡು ವಾರಗಳಿಗೆ ಮುಂದೂಡಲಾಗಿದೆಯೆಂದು ಸರ್ಕಾರಿ ವಕೀಲರು ಮೇಲೆ ಓದಲಾದ ಕ್ರಮ ಸಂಖ್ಯೆ (12)ರ ದಿ: 2–6–2008ರ ಪತ್ರದಲ್ಲಿ ತಿಳಿಸುತ್ತಾ, ಮಾನ್ಯ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ: 4123/2007ರಲ್ಲಿ

ದಿನಾಂಕ 29–11–2007ರಂದು ನೀಡಿರುವ ತೀರ್ಪನ್ನು ಅನುಷ್ಠಾನಗೊಳಿಸುವಂತೆ ಇಲ್ಲದಿದ್ದ ಪಕ್ಷದಲ್ಲಿ ನ್ಯಾಯಮಂಡಳಿಯು ನಿಂದನಾ ಅರ್ಜಿಯನ್ನು ಅಂಗೀಕರಿಸಿ ತೆಗೆದುಕೊಳ್ಳುವ ತೀರ್ಪಿಗೆ ಅವರು ಹೊಣೆಗಾರರಲ್ಲವೆಂದು ತಿಳಿಸಿರುತ್ತಾರೆ.

ಸರ್ಕಾರಿ ವಕೀಲರ ದಿ: 2–6–2008ರ ಪತ್ರದಲ್ಲಿನ ಅಂಶವನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ 4123/2007ರಲ್ಲಿ ದಿ: 29–11–2007ರಲ್ಲಿ ನೀಡಿರುವ ತೀರ್ಪನ್ನು ಅನುಷ್ಠಾನಗೊಳಿಸಲು ತೀರ್ಮಾನಿಸಿ, ಲೋಕಾಯುಕ್ತರು ಈ ಪ್ರಕರಣದಲ್ಲಿ ಕೈಗೊಂಡಿರುವ ಪುನರ್ ತನಿಖೆಯ (Fresh Investigation) ಅಂತಿಮ ವರದಿಯನ್ನು ಕಾಯ್ದಿರಿಸಿ ಶ್ರೀ ಎಲ್.ಕೆ. ದೇಶಪಾಂಡೆರವರಿಗೆ ಉನ್ನತೀಕರಿಸಲಾದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿಗೆ ಸ್ಥಾನಪನ್ನ ಬಡ್ತಿ ನೀಡಲು ತೀರ್ಮಾನಿಸಿ ಇವರಿಗಿಂತ ಕಿರಿಯರಾದ ಶ್ರೀ ಹೆಚ್. ಕೃಷ್ಣ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಕಾರವಾರ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32ರಡಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ (ವೇತನ ಶ್ರೇಣಿ 14050–25050) ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿದ ದಿನಾಂಕದಿಂದ ಅಂದರೆ ದಿ: 17–11–2004 ರಿಂದ ಜಾರಿಗೆ ಬರುವಂತೆ ಸ್ವತಂತ್ರ ಪ್ರಭಾರದಲ್ಲಿರಿಸಿ ಸ್ಥಳ ನಿಯುಕ್ತಿಗೊಳಿಸಲು ಹಾಗೂ ಶ್ರೀ ಎಲ್.ಕೆ. ದೇಶಪಾಂಡೆ ಇವರಿಗೆ ಸ್ಥಾನಪನ್ನ ಬಡ್ತಿ ನೀಡುವ ಬಗ್ಗೆ ಪರಿಗಣಿಸಿ ಪ್ರತ್ಯೇಕವಾಗಿ ಆದೇಶ ಹೊರಡಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 470 ಎಸ್‌ಜೆಡಿ 2007, ಬೆಂಗಳೂರು, ದಿನಾಂಕ: 30ನೇ ಜೂನ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಹಾಗೂ ಶ್ರೀ ಎಲ್.ಕೆ. ದೇಶಪಾಂಡೆ ರವರು ಕೆ.ಎ.ಟಿ.ಯಲ್ಲಿ ಹೂಡಿರುವ ನಿಂದನಾ ಅರ್ಜಿ ಸಂಖ್ಯೆ 47/2007ರ ಹಿನ್ನೆಲೆಯಲ್ಲಿ, ಮಾನ್ಯ ನ್ಯಾಯಮಂಡಳಿಯು ಕೆ.ಎ.ಟಿ. ಅರ್ಜಿ ಸಂಖ್ಯೆ 4123/2007ರ ದಿ: 29–11–2007ರಂದು ನೀಡಿರುವ ತೀರ್ಪನ್ನು ಅನುಷ್ಠಾನಗೊಳಿಸಿ, ಹಾಗೂ ಲೋಕಾಯುಕ್ತರು ಈ ಪ್ರಕರಣದಲ್ಲಿ ಕೈಗೊಂಡಿರುವ ಪುನರ್ ತನಿಖೆಯ (Fresh Investigation) ಅಂತಿಮ ವರದಿಯನ್ನು ಕಾಯ್ದಿರಿಸಿ ಶ್ರೀ ಎಲ್.ಕೆ. ದೇಶಪಾಂಡೆರವರಿಗೆ ಉನ್ನತೀಕರಿಸಿಲಾದ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ ಹುದ್ದೆಗೆ (ಸಹಾಯಕ ನಿರ್ದೇಶಕರ ಹುದ್ದೆಗೆ ಸಮಾನವಾದ) ಸ್ಥಾನಪನ್ನ ಬಡ್ತಿ ನೀಡಿ ಇವರಿಗಿಂತ ಕಿರಿಯರಾದ ಶ್ರೀ ಹೆಚ್. ಕೃಷ್ಣ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಕಾರವಾರ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 32ರಡಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ (ವೇತನ ಶ್ರೇಣಿ 14050–25050) ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿದ ದಿನಾಂಕದಿಂದ ಅಂದರೆ ದಿ: 17–11–2004 ರಿಂದ ಜಾರಿಗೆ ಬರುವಂತೆ ಸ್ವತಂತ್ರ ಪ್ರಭಾರದಲ್ಲಿರಿಸಿ ನಿರೂಪಣಾಧಿಕಾರಿ, ಉಪನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೊಪ್ಪಳ ಜಿಲ್ಲೆ ಇಲ್ಲಿನ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲಾಗಿದೆ.

ಮುಂದುವರೆದು ಶ್ರೀ ದೇಶಪಾಂಡೆ ಇವರಿಗೆ ಸಹಾಯಕ ನಿರ್ದೇಶಕರ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡುವ ಬಗ್ಗೆ ಪರಿಗಣಿಸಿ ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1012

**ಆರ್.ಎಂ. ಚಂದ್ರಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ಸಂಖ್ಯೆ: ಕಸಂವಾಪ್ರ 174 ಕೆಎಂಯು 2008, ಬೆಂಗಳೂರು, ದಿನಾಂಕ: 28ನೇ ಆಗಸ್ಟ್ 2008.**

**ತಿದ್ದೋಲೆ**

ಸರ್ಕಾರಿ ಆದೇಶ ಸಂಖ್ಯೆ ಸಂಕಇ 81 ಕೆಎಂಯು 2002 ದಿನಾಂಕ 10–4–2008ರಲ್ಲಿನ ಪ್ರಸ್ತಾವನೆ ಭಾಗದ 9ನೇ ಪಂಕ್ತಿಯಲ್ಲಿ ನಮೂದಿಸಿರುವ ಕೆ.ಎಲ್. ಶಿವಲಿಂಗಯ್ಯ ಎಂಬುದರ ಬದಲಾಗಿ ಕೆ.ಎಲ್ ಸಿದ್ದಲಿಂಗಪ್ಪ ಎಂದು ದಿನಾಂಕ 10–4–2008ರಿಂದಲೇ ಜಾರಿಗೆ ಬರುವಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1273

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಕೆ.ಜೈ ಪ್ರಕಾಶ್, ಮುಖ್ಯ ಇಂಜಿನಿಯರ್ ಹಾಗೂ ಬಿ.ಎಲ್. ರವೀಂದ್ರಬಾಬು ಅಧೀಕ್ಷಕ ಇಂಜಿನಿಯರ್ ಲೋಕೋಪಯೋಗಿ ಇಲಾಖೆ ಅವರುಗಳನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 18 ಇಮುವಿ 2008, ಬೆಂಗಳೂರು, ದಿನಾಂಕ:9ನೇ ಜುಲೈ 2008**

ಶ್ರೀ ಕೆ.ಜೈ. ಪ್ರಕಾಶ್, ಮುಖ್ಯ ಇಂಜಿನಿಯರ್, ಬಿಎಂಆರ್‌ಸಿಎಲ್ ಹಾಗೂ ಬಿ.ಎಲ್. ರವೀಂದ್ರಬಾಬು, ಅಧಿಕ್ಷಕರ ಇಂಜಿನಿಯರ್, ಲೋಕೋಪಯೋಗಿ ಇಲಾಖೆ ಅವರುಗಳು ಮುಖ್ಯ ಇಂಜಿನಿಯರ್ ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ, ರಾಮನಗರದಲ್ಲಿ ಸ್ಥಾಪಿಸಲು ಉದ್ದೇಶಿಸಿದ್ದ ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನ ವಿಶ್ವವಿದ್ಯಾಲಯದ ಕಟ್ಟಡಗಳನ್ನು ಕಟ್ಟಲು ಅಗತ್ಯವಾದ ಜಮೀನು ಲಭ್ಯವಿಲ್ಲದಿದ್ದರೂ ಸಹ ಗುತ್ತಿಗೆದಾರರಾದ ಮೆಸರ್ಸ್ ನಾಗಾರ್ಜುನ ಕನ್ಸ್‌ಟ್ರಕ್ಷನ್ಸ್ ಅವರಿಗೆ ಕಾರ್ಯಾದೇಶವನ್ನು ಕೊಟ್ಟು ಬಾರಿ ಪ್ರಮಾಣದ ಬಡ್ಡಿ ರಹಿತ ಮುಂಗಡವನ್ನು ಗುತ್ತಿಗೆದಾರರಿಗೆ ಬಿಡುಗಡೆ ಮಾಡಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿ ತೀವ್ರ ದುರ್ನಡತೆ ಎಸಗಿರುವುದು ಕಂಡು ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಕೆ. ಜೈ. ಪ್ರಕಾಶ್, ಮುಖ್ಯ ಇಂಜಿನಿಯರ್ ಹಾಗೂ ಬಿ.ಎಲ್. ರವೀಂದ್ರಬಾಬು ಅಧೀಕ್ಷಕ ಇಂಜಿನಿಯರ್, ಅವರುಗಳ ವಿರುದ್ಧ ಕನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರನ್ವಯ ಶಿಸ್ತು ಕ್ರಮವನ್ನು ಜರುಗಿಸಲು ಸರ್ಕಾರವು ಉದ್ದೇಶಿರುವುದರಿಂದಲೂ,

ಶಿಸ್ತಿನ ಕ್ರಮವನ್ನು ಬಾಕಿಯಿಟ್ಟು ಶ್ರೀ ಕೆ.ಜೈ. ಪ್ರಕಾಶ್, ಮುಖ್ಯ ಇಂಜಿನಿಯರ್ ಹಾಗೂ ಬಿ.ಎಲ್. ರವೀಂದ್ರಬಾಬು ಅಧೀಕ್ಷಕ ಇಂಜಿನಿಯರ್, ಅವರುಗಳನ್ನು ಅಮಾನತ್ತಿನಲ್ಲಿಡುವುದು ಅಗತ್ಯವೆಂದು ಸರ್ಕಾರವು ಭಾವಿಸಿರುವುದರಿಂದಲೂ.

ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1) (ಡಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಜೈ. ಪ್ರಕಾಶ್ ಮುಖ್ಯ ಇಂಜಿನಿಯರ್ ಹಾಗೂ ಬಿ.ಎಲ್. ರವೀಂದ್ರಬಾಬು ಅಧೀಕ್ಷಕ ಇಂಜಿನಿಯರ್, ಅವರುಗಳ ವಿರುದ್ಧದ ಶಿಸ್ತಿನ ಕ್ರಮವನ್ನು ಬಾಕಿಯಿಟ್ಟು ಅವರುಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಕೆ.ಜೈ. ಪ್ರಕಾಶ್, ಮುಖ್ಯ ಇಂಜಿನಿಯರ್ ಹಾಗೂ ಬಿ.ಎಲ್. ರವೀಂದ್ರಬಾಬು ಅಧೀಕ್ಷಕರ ಇಂಜಿನಿಯರ್ ಅವರುಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 98ನೇ ನಿಯಮದನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಕೆ.ಜೈ. ಪ್ರಕಾಶ್ ಮುಖ್ಯ ಇಂಜಿನಿಯರ್ ಹಾಗೂ ಬಿ.ಎಲ್. ರವೀಂದ್ರಬಾಬು ಅಧೀಕ್ಷಕ ಇಂಜನಿಯರ್, ಅವರುಗಳು ತಾವು ಕಾರ್ಯ ನಿರ್ವಹಿಸುವ ಕೇಂದ್ರ ಸ್ಥಾನವನ್ನು ಸಕ್ಷಮ ಪ್ರಾಧಿಕಾರಿಯ ಅನುಮತಿ ಪಡೆಯದೇ ಬಿಡತಕ್ಕದ್ದಲ್ಲ.

ಶ್ರೀ ಕೆ.ಜೈ. ಪ್ರಕಾಶ್, ಮುಖ್ಯ ಇಂಜಿನಿಯರ್ ಹಾಗೂ ಬಿ.ಎಲ್. ರವೀಂದ್ರಬಾಬು ಅಧೀಕ್ಷಕ ಇಂಜಿನಿಯರ್, ಅವರುಗಳ ಸ್ಥಾನಕ್ಕೆ ತಾತ್ಕಾಲಿಕವಾಗಿ ಬದಲಿ ವ್ಯವಸ್ಥೆ ಮಾಡಲು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆರವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1053

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಸಾರಿಗೆ ಇಲಾಖೆಗೆ ಪ್ರತ್ಯೇಕ ಸಮನ್ವಯ, ಸ್ವೀಕೃತಿ ಮತ್ತು ರವಾನೆ ಶಾಖೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ:ಡಿಪಿಎಆರ್ 5 ಎಆರ್‌ಬಿ 2006 ದಿನಾಂಕ:22–6–2006

2. ಪ್ರಧಾನ ಕಾರ್ಯದರ್ಶಿ, ಸಾರಿಗೆ ಇಲಾಖೆ ಇವರ ಅರೆ ಸರ್ಕಾರಿ ಪತ್ರ ಸಂಖ್ಯೆಸಾರಿಇ 37 ಸ್ವೀರಶಾ 2007 ದಿನಾಂಕ:10–7–2007

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:22–6–2006ರ ಅಧಿಸೂಚನೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಒಳಾಡಳಿತ ಮತ್ತು ಸಾರಿಗೆ ಇಲಾಖೆಯನ್ನು ಬೇರ್ಪಡಿಸಿ ಸ್ವತಂತ್ರ ಸಾರಿಗೆ ಇಲಾಖೆಯನ್ನು ಸೃಜಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:10–7–2007ರ ಅರೆ ಸರ್ಕಾರಿ ಪತ್ರದಲ್ಲಿ ಸಾರಿಗೆ ಇಲಾಖೆಗೆ ಸಂಬಂಧಿಸಿದ ಇಲಾಖೆಯ ಕಾರ್ಯಗಳನ್ನು ನಿರ್ವಹಿಸಲು ಸಚಿವಾಲಯ ಕೈಪಿಡಿಯಲ್ಲಿ ರೂಪಿಸಿರುವ ನಿಯಮಗಳನ್ವಯ ಒಂದು ಪ್ರತ್ಯೇಕ ಸಮನ್ವಯ, ಸ್ವೀಕೃತಿ ಮತ್ತು ರವಾನೆ ಶಾಖೆಯನ್ನು ಅಗತ್ಯ ಸಿಬ್ಬಂದಿ ಹುದ್ದೆಯೊಂದಿಗೆ ಸೃಜಿಸುವಂತೆ ಸಾರಿಗೆ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಕೋರಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 375 ಸಅಸೇ 2007, ಬೆಂಗಳೂರು, ದಿನಾಂಕ:10ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಾರಿಗೆ ಇಲಾಖೆಯಲ್ಲಿ ಒಂದು ಸ್ವೀಕೃತಿ ಮತ್ತು ರವಾನೆ ಶಾಖೆಯನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ಸೃಜಿಸಲಾಗಿದೆ ಹಾಗೂ ಸದರಿ ಹುದ್ದೆಗಳನ್ನು ರಿ–ಡಿಪ್ಲಾಯ್‌ಮೆಂಟ್ ಮೂಲಕ ಭರ್ತಿ ಮಾಡಲು ಆದೇಶಿಸಲಾಗಿದೆ.

| ಕ್ರ.ಸಂ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಶಾಖಾಧಿಕಾರಿ | 01 ಹುದ್ದೆ |
| 2 | ಸಹಾಯಕ | 1 ಹುದ್ದೆ |
| 3 | ಕಿರಿಯ ಸಹಾಯಕ | 2 ಹುದ್ದೆಗಳು |
| 4 | ಬೆರಳಚ್ಚುಗಾರರು | 1 ಹುದ್ದೆಗಳು |
| 5 | ದಲಾಯತ್ | 2 ಹುದ್ದೆಗಳು |
| | ಒಟ್ಟು | 7 ಹುದ್ದೆಗಳು |

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ:13.6.2008 ಸಂಖ್ಯೆ:ಆಇ 2017 ವೆಚ್ಚ–5 2008ರ ಟಿಪ್ಪಣಿಯಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1054

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಸಮಾಜ ಕಲ್ಯಾಣ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ: ಸಕಇ 120 ಬಿಸಿಎ 2008, ಬೆಂಗಳೂರು, ದಿನಾಂಕ:24ನೇ ಸೆಪ್ಟೆಂಬರ್ 2008**

ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರೇ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) ಅಧಿನಿಯಮ 1997ರ ಪರಿಚ್ಛೇದ 4(ಎ)ರಲ್ಲಿ ತಾಲ್ಲೂಕು ತಹಶೀಲ್ದಾರ್ ರವರು ಜಾತಿಪ್ರಮಾಣ ಪತ್ರ ಮತ್ತು ಜಾತಿ ಮತ್ತು ಆದಾಯ ಪ್ರಮಾಣ ಪತ್ರ ನೀಡಲು ಪ್ರಾಧಿಕಾರ ನೀಡಲಾಗಿದೆ.

ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರೇ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) ನಿಯಮಗಳು 1992ರ ನಿಯಮ 3ಸಿ ರಂತೆ ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳ ಮೀಸಲಾತಿ) ಅಧಿನಿಯಮ, 1990ರ ಪರಿಚ್ಛೇದ 4ಎ ಮತ್ತು 5ಎ ಗಳ ಅಡಿಯಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳು ಮತ್ತು ಪ್ರವರ್ಗ–I ಗಳಿಗೆ ನೀಡಿದ ಜಾತಿ ಪ್ರಮಾಣ ಪತ್ರಗಳು ಅವುಗಳನ್ನು ರದ್ದುಪಡಿಸುವವರೆಗೆ ಅಥವಾ ಅರ್ಜಿದಾರನು ತನ್ನ ಧಾರ್ಮಿಕ ನಿಷ್ಠೆ ಬದಲಾಯಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ. ಹಿಂದುಳಿದ ವರ್ಗಗಳಿಗೆ ನೀಡುವ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳು ಐದು ವರ್ಷಗಳವರೆಗೆ ಅಥವಾ ಅವುಗಳನ್ನು ರದ್ದುಪಡಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸಿಂಧುತ್ವದಲ್ಲಿರುತ್ತದೆ.

ಅಧಿಸೂಚನೆ ಸಂಖ್ಯೆ:ಸಕಇ 132 ಎಸ್‌ಎಡಿ 97, ದಿನಾಂಕ:8.2.2000ರಲ್ಲಿ ನಿಯಮ 3ಎ(1)ರ ಅಡಿಯಲ್ಲಿ ನಿಗದಿ ಪಡಿಸಲಾದ ನಮೂನೆಯಲ್ಲಿ 3ಎ (2)ರ ರೀತ್ಯಾ ಜಾತಿ ಪ್ರಮಾಣ ಪತ್ರ/ಜಾತಿ ಆದಾಯ ಪ್ರಮಾಣ ಪತ್ರಕ್ಕಾಗಿ ಅರ್ಜಿ ಸಲ್ಲಿಸಿದ ದಿನಾಂಕದಿಂದ 2 ತಿಂಗಳ ಕಾಲಾವಧಿಯೊಳಗೆ ಪ್ರಮಾಣ ಪತ್ರಗಳನ್ನು ನೀಡಬೇಕೆಂದು, ಒಂದು ವೇಳೆ ಅರ್ಜಿದಾರರು ತಾವು

ಕೋರಿದ ಪ್ರಮಾಣ ಪತ್ರಕ್ಕೆ ಅರ್ಹರಿಲ್ಲದಿದ್ದಲ್ಲಿ ನಿಯಮ 3ಎ(3) ಅಡಿ ಪರಿಶೀಲನೆ ಮಾಡಿ ಅರ್ಹರಿಲ್ಲದ ಬಗ್ಗೆ ದೃಢಿಕರಿಸಿ 2 ತಿಂಗಳ ಒಳಗಾಗಿ ಆದೇಶ ಹೊರಡಿಸಬೇಕೆಂದು ಸೂಚಿಸಿದೆ. ಸದರಿ ಆದೇಶದಿಂದ ಬಾಧಿತರಾದ ಅರ್ಜಿದಾರರು ನಿಯಮ 3ಬಿ ಅಡಿಯಲ್ಲಿ ಸಂಬಂಧಪಟ್ಟ ಮೇಲ್ಮನವಿ ಪ್ರಾಧಿಕಾರಿಗಳಿಗೆ ಮೇಲ್ಮನವಿ ಸಲ್ಲಿಸಲು ಅವಕಾಶ ಕಲ್ಪಿಸಲಾಗಿದೆ.

ಶಿಕ್ಷಣ ಸಂಸ್ಥೆಯ ಮುಖ್ಯಸ್ಥರುಗಳು ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳಿಗೆ ಪ್ರವೇಶ ಕೊಡುವ ಸಮಯದಲ್ಲಿ ಪ್ರತೀ ಸಲವೂ ಹೊಸದಾಗಿ ಪಡೆದ ಜಾತಿ ಪ್ರಮಾಣ ಪತ್ರಗಳನ್ನು ಒದಗಿಸಬೇಕೆಂದು ಒತ್ತಾಯಪಡಿಸುತ್ತಿರುವ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದ ಹಿನ್ನಲೆಯಲ್ಲಿ ಸರ್ಕಾರ ಸುತ್ತೋಲೆ ಸಂಖ್ಯೆ:ಸಕಇ 25 ಬಿಸಿಎ 2002, ದಿನಾಂಕ:23.3.2002 ಹೊರಡಿಸಿದ್ದು ಅದರಲ್ಲಿ ಶಿಕ್ಷಣ ಸಂಸ್ಥೆಗಳು ವಿದ್ಯಾರ್ಥಿಗಳಿಗೆ ಪ್ರವೇಶ ನೀಡುವ ಸಮಯದಲ್ಲಿ ವಿದ್ಯಾರ್ಥಿಗಳಿಂದ ಪಡೆದ ಮೂಲ ಪ್ರಮಾಣ ಪತ್ರಗಳನ್ನು ಕೂಡಲೇ ಪರಿಶೀಲಿಸಿ ಹಿಂದಿರುಗಿಸಬೇಕೆಂದು ಮತ್ತು ಪ್ರಮಾಣೀಕರಿಸಿದ ಫೋಟೋ ಪ್ರತಿಯನ್ನು ಇಟ್ಟುಕೊಳ್ಳಬೇಕೆಂದು ಎಲ್ಲಾ ಶಿಕ್ಷಣ ಪ್ರಾಧಿಕಾರಿಗಳಿಗೆ ಸೂಚಿಸಿದೆ. ಈ ನಿಯಮಗಳನ್ನು ಉಲ್ಲಂಘಿಸಿದವರ ವಿರುದ್ಧ ಕಠಿಣ ಕ್ರಮ ಜರುಗಿಸಲಾಗುವುದೆಂದು ಎಲ್ಲಾ ಶೈಕ್ಷಣಿಕ ಸಂಸ್ಥೆಗಳಿಗೆ ಸೂಕ್ತ ತಿಳುವಳಿಕೆ ನೀಡುವಂತೆ ಜಿಲ್ಲಾ ಶಿಕ್ಷಣಾಧಿಕಾರಿಗಳಿಗೆ, ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳಿಗೆ ಮತ್ತು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ನಿರ್ದೇಶನ ನೀಡಿ ದಿನಾಂಕ:23.3.2002 ರಂದು ಸುತ್ತೋಲೆಯೊಂದನ್ನು ಹೊರಡಿಸಲಾಗಿದೆ.

ಮೇಲ್ಕಂಡ ಅಧಿನಿಯಮ, ನಿಯಮ, ಸುತ್ತೋಲೆಗಳನ್ವಯ ಪರಿಶೀಲಿಸಿ ತಹಶೀಲ್ದಾರರು, ಜಾತಿ ಪ್ರಮಾಣ ಪತ್ರ ಹಾಗೂ ಜಾತಿ, ಆದಾಯ ಪ್ರಮಾಣ ಪತ್ರಗಳನ್ನು ನೀಡುವಂತೆ ಹಾಗೂ ಎಲ್ಲಾ ಶಿಕ್ಷಣ ಸಂಸ್ಥೆಗಳು ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಪ್ರವೇಶ ನೀಡುವಾಗ ಅಭ್ಯರ್ಥಿಗಳು ಹಾಜರುಪಡಿಸಿದ ಜಾತಿ, ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಸರ್ಕಾರದ ನಿಯಮಗಳ ರೀತ್ಯಾ ಪರಿಶೀಲಿಸಿ ಪ್ರವೇಶ ನೀಡುವಂತೆ ಅಧೀನ ಶಿಕ್ಷಣ ಸಂಸ್ಥೆಗಳಿಗೆ ನಿರ್ದೇಶನ ನೀಡತಕ್ಕದ್ದು. ಅಂತೆಯೇ, ನೇಮಕಾತಿ/ಆಯ್ಕೆ ಪ್ರಾಧಿಕಾರಗಳು ಅಭ್ಯರ್ಥಿಗಳು ಅರ್ಜಿಯೊಂದಿಗೆ ಸಲ್ಲಿಸಲಾಗುವ ಜಾತಿ ಪ್ರಮಾಣ ಪತ್ರ ಮತ್ತು ನಿಗದಿತ ಚಾಲ್ತಿ ಅವಧಿಯೊಳಗೆ ಇರುವಂತಹ ಜಾತಿ ಆದಾಯ ಪ್ರಮಾಣ ಪತ್ರಗಳನ್ನೊಳಗೊಂಡ ಅರ್ಜಿ ಸ್ವೀಕರಿಸಿ ಅದಕ್ಕನುಗುಣವಾಗಿ ನೇಮಕಾತಿ ಅಧಿಸೂಚನೆಗಳನ್ನು ಹೊರಡಿಸತಕ್ಕದ್ದು.

ಈಗಾಗಲೇ ಜಾತಿ, ಆದಾಯ ಸಿಂಧುತ್ವ ಪ್ರಮಾಣ ಪತ್ರ ಪಡೆದಿರುವ ಅಭ್ಯರ್ಥಿಗಳಿಗೆ ಹೊಸದಾಗಿ ಜಾತಿ, ಆದಾಯ ಸಿಂಧುತ್ವ ಪ್ರಮಾಣ ಪತ್ರ ಒದಗಿಸ ಬೇಕೆಂದು ಒತ್ತಾಯಿಸುವ ಶಿಕ್ಷಣ ಸಂಸ್ಥೆಗಳ ವಿರುದ್ಧ ಸೂಕ್ತ ಕ್ರಮ ಜರುಗಿಸಲಾಗವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1378

**ಕೆ. ಸುಬ್ಬಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಮಾಜ ಕಲ್ಯಾಣ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಮೆಡಿಕಲ್ ಟ್ರೈನಿಂಗ್, ಸೆಂಟರ್ ಕಮಾಂಡ್ ಆಸ್ಪತ್ರೆ ಬೆಂಗಳೂರು ಇದರ ಅಭ್ಯರ್ಥಿಗಳಿಗೆ ಪ್ಯಾರಾ ಮೆಡಿಕಲ್ ಕೋರ್ಸುಗಳಿಗೆ ದಾಖಲಾತಿ ವಯೋಮಿತಿಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಆಕುಕ 328 ಎಂಎಸ್ಎಫ್ 2006, ದಿನಾಂಕ:10–11–2006
2. ಪತ್ರ ಸಂಖ್ಯೆ:ಪಿಎಂಬಿ/14/2005–06, ದಿನಾಂಕ:19–3–2008

**ಪ್ರಸ್ತಾವನೆ:**

ರಾಜ್ಯದ ಪ್ಯಾರಾಮೆಡಿಕಲ್ ಕೋರ್ಸುಗಳಿಗೆ ವಿದ್ಯಾರ್ಥಿಗಳ ದಾಖಲಾತಿ ಗರಿಷ್ಠ ವಯೋಮಿತಿಯನ್ನು ಸಾಮಾನ್ಯ ಅಭ್ಯರ್ಥಿಗಳಿಗೆ 35 ವರ್ಷ ಮತ್ತು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಅಭ್ಯರ್ಥಿಗಳಿಗೆ 40 ವರ್ಷಗಳೆಂದು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹೊರಡಿಸಿರುವ ಪ್ಯಾರಾಮೆಡಿಕಲ್ ಬೋರ್ಡ್ ರೂಲ್ಸ್‌ನಲ್ಲಿ ನಿಗದಿಗೊಳಿಸಲಾಗಿದೆ.

ಪ್ಯಾರಾಮೆಡಿಕಲ್ ಬೋರ್ಡ್, ಬೆಂಗಳೂರು ಇದರ ಪೀಠಸ್ಥರು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ವಾಯುಪಡೆಯ ಅಭ್ಯರ್ಥಿಗಳು ಸುಮಾರು 20–25 ವರ್ಷಗಳ ಸೇವೆಯನ್ನು ದೇಶದ ಭದ್ರತೆಯಲ್ಲಿ ಸಲ್ಲಿಸಿ ನಿವೃತ್ತಿ ಹೊಂದಲಿದ್ದು ಇಂತಹವರಲ್ಲಿ ಕೆಲವು 40 ರಿಂದ 50 ವರ್ಷಗಳ ವಯೋಮೊತಿಯಲ್ಲಿರುತ್ತಾರೆಂದು, ಇವರು ನಿವೃತ್ತಿ ಹೊಂದಿದ ನಂತರ ಇವರ ಜೀವನ ಅಭದ್ರತೆಯಾಗಿರುತ್ತದೆಯೆಂದು, ಇಂತಹವರಲ್ಲಿ ಎಸ್.ಎಸ್.ಎಲ್.ಸಿ ಮತ್ತು ಪಿ.ಯು.ಸಿ ವಿದ್ಯಾಹತೆಯ ಸುಮಾರು 50 ಮಂಡಿ ಸೇನಾ ನೌಕರರು ಇರುತ್ತಾರೆಂದು, ಇವರಿಗೆ ಗರಿಷ್ಠ ವಯೋಮಿತಿಯಲ್ಲಿ ವಿನಾಯಿತಿ ನೀಡುವುದು ಅವಶ್ಯವಿದೆಯಂದು ವರದಿ ಮಾಡುತ್ತ ದಾಖಲಾತಿ ಗರಿಷ್ಠ ವಯೋಮಿತಿಯನ್ನು 50 ವರ್ಷಗಳಿಗೆ ಒಂದು ಬಾರಿಗೆ ಮಾತ್ರ ಹೆಚ್ಚಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕುಷವಾಗಿ ಪರಿಶೀಲಿಸಿದ ನಂತರ ಮೆಡಿಕಲ್ ಟ್ರೈನಿಂಗ್ ಸೆಂಟರ್, ಕಮಾಂಡ್ ಆಸ್ಪತ್ರ, ಬೆಂಗಳೂರು ಇದರಲ್ಲಿ ಪ್ಯಾರಾಮೆಡಿಕಲ್ ಕೋರ್ಸ್‌ಗಳಿಗೆ ಸೇರುವ ಸೇವಾನಿರತ ವಾಯು ಸೇವಾ ಅರ್ಭ್ಯಥಿಗಳಿಗೆ ದಾಖಲಾತಿ ಗರಿಷ್ಠ ವಯೋಮಿತಿಯನ್ನು 50 ವರ್ಷಗಳಿಗೆ ನಿಗಧಿಗೊಳಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 42 ಎಂಎಂಇ 2008, ಬೆಂಗಳೂರು, ದಿನಾಂಕ:11ನೇ ಜುಲೈ 2008**

ಮೆಡಿಕಲ್ ಟ್ರೈನಿಂಗ್, ಕಮಾಂಡ್ ಆಸ್ಪತ್ರೆ, ಅಗರಂ, ಪೋಸ್ಟ್ ಬೆಂಗಳೂರು–560007 ಇಲ್ಲಿ ಪ್ಯಾರಾ ಮೆಡಿಕಲ್ ಕೋರ್ಸ್‌ಗಳಿಗೆ ಸೇರುವ ಸೇವಾನಿರತ ವಾಯುಸೇನಾ ಅಭ್ಯರ್ಥಿಗಳಿಗೆ ದಾಖಲಾತಿ ಗರಿಷ್ಠ ವಯೋಮಿತಿಯನ್ನು 50 ವರ್ಷಗಳಿಗೆ ಈ ಕೂಡಲೇ ಜಾರಿಗೆ ಬರುವಂತೆ ಒಂದು ಬಾರಿಗೆ ಮಾತ್ರ ನಿಗದಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1056

**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಪ್ರೇಮ್‌ಕುಮಾರ್, ಸಿ.ಹೆಚ್.ಸಿ–111, ಸಂಚಾರಿ ನಿಯಂತ್ರಣ ಪೊಲೀಸ್ ಠಾಣೆ, ಕೋಲಾರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ ಇವರ ಆದೇಶ ಸಂಖ್ಯೆ:ಡಿ.ಇ.2:94–95:ಒ:ಬಿ:33:95 ದಿನಾಂಕ:22–9–1995

2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು 34:95–96 ಓ.ಬಿ. 223 ದಿ:3–1–96 & ಓ.ಬಿ. 87:99–2000 ದಿನಾಂಕ:18–11–99

3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:31–3–2000

4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು (1) 4:2000–01 ದಿನಾಂಕ:3–1–2008

**ಪ್ರಸ್ತಾವನೆ:**

ಶ್ರೀ ಪ್ರೇಮ್‌ಕುಮಾರ್, ಸಿ.ಹೆಚ್.ಸಿ–111, ಸಂಚಾರಿ ನಿಯಂತ್ರಣ ಪೊಲೀಸ್ ಠಾಣೆ, ಕೋಲಾರ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ದಿ:30–12–93 ರಂದು ಗ್ರಾಮ ಪಂಚಾಯತಿ ಮತಗಳ ಎಣಿಕೆ ಬಂದೋಬಸ್ತ್ ಕರ್ತವ್ಯವನ್ನು ಶಿಡ್ಲಘಟ್ಟ ಪುರದಲ್ಲಿ ಸಂಜೆ 6–30 ಗಂಟೆಯವರೆಗೆ ನಿರ್ವಹಿಸಿ ನಂತರ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ಮೇಲಾಧಿಕಾರಿಗಳ ಅನುಮತಿ ಇಲ್ಲದೆ ಕೇಂದ್ರ ಸ್ಥಾನ ಬಿಟ್ಟು ರಾಯಲಪಾಡ್ ಪೊಲೀಸ್ ಠಾಣೆಯ ಸರಹದ್ದಿನ ಗೌನಪಲ್ಲಿ ಗ್ರಾಮಕ್ಕೆ ಬಂದು ರಾತ್ರಿ ಸುಮಾರು 10.00 ಗಂಟೆಯಲ್ಲಿ ಗೌನಪಲ್ಲಿಯ ಜನತಾ ದಳದ ಕಾರ್ಯಕರ್ತರಾದ ಶ್ರೀ ಶ್ರೀನಿವಾಸ್ ಎಂಬುವ ವಾಸದ ಮನೆಯ ಬಳಿ ಬಂದು ಕೈಗಳಿಂದ ಕಿಟಕಿಗಳನ್ನು ಗುದ್ದಿ ಗಲಾಟೆ ಮಾಡಿದ್ದು, ಈ ಹಿನ್ನಲೆಯಲ್ಲಿ ಗೌನಪಲ್ಲಿಯಲ್ಲಿ ಜನತಾ ದಳ ಹಾಗೂ ಕಾಂಗ್ರೆ ಕಾರ್ಯಕರ್ತರ ನಡುವೆ ಗಲಾಟೆ ಗಳಾಗಿ ಕಾಂಗ್ರೆಸ ಮಂಜುನಾಥ ಎಂಬುವ ಕೊಲೆಯಾಗಿದ್ದು ಅಲ್ಲದೆ, ಕರ್ತವ್ಯ ನಿರತರಾಗಿದ್ದ ಪೊಲೀಸ್ ಸಿಬ್ಬಂದಿಯ ಮೇಲೆ ಸಹ ಹಲ್ಲೆ ನಡೆದಿದ್ದು ಗ್ರಾಮದಲ್ಲಿ ಅಶಾಂತಿ ಉಂಟಾಗಲು ಕಾರಣರಾಗಿದ್ದು, ಕರ್ತವ್ಯದಲ್ಲಿ ಅತೀವ ಲೋಪ ಹಾಗೂ ದುರ್ನಡತೆಯನ್ನು ತೋರಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬಿತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ ಇವರು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:22–9–1995ರ ಆದೇಶದಲ್ಲಿ ಅರ್ಜೀದಾರರನ್ನು ಸೇವೆಯಿಂದ ವಜಾಮಾಡಿ ಅಮಾನತ್ತಿನ ಅವಧಿಯನ್ನ ಅಮಾನತ್ತೆಂದು ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು ಕೇಂದ್ರ ವಲಯ, ಬೆಂಗಳೂರು ರವರು ದಿ:3–1–96ರ ಆದೇಶದಲ್ಲಿ ಅರ್ಜಿದಾರರ ಅಪೀಲನ್ನು ತಿರಸ್ಕರಿಸಿರುತ್ತಾರೆ. ಸದರಿಯವರು ಈ ಎರಡೂ ಆದೇಶಗಳ ವಿರುದ್ಧ ಕೆ.ಎ.ಟಿಯಲ್ಲಿ ಅರ್ಜಿ ಸಂಖ್ಯೆ:7600/96ನು ಸಲ್ಲಿಸಿದ್ದು, ನ್ಯಾಯಾಲಯವು ಅರ್ಜಿಯನ್ನು ಪರಿಗಣಿಸಿ, ಮಾಡಿರುವ ಆದೇಶವನ್ನು ಪ್ರವೇಶಿಸುವುದು ನ್ಯಾಯವಲ್ಲವೆಂತಲೂ ಎಂದು ಹೇಳಿ ಅರ್ಜಿಯನ್ನು ವಿಲೇ ಮಾಡಿರುತ್ತದೆ. ಅದರಂತೆ ಅರ್ಜಿದಾರರು ದಿ:30–10–99ರಂದು ಮತ್ತೊಂದು ಮನವಿಯನ್ನು ಅಪೀಲು ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಅದನ್ನು ಪರಿಶೀಲಿಸಿ ಮೇಲ್ಮನವಿ ಪ್ರಾಧಿಕಾರವು ಪರಿಗಣಿಸಿ ದಿ:18–11–99ರ ಆದೇಶದಲ್ಲಿ ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

1) ಶ್ರೀ ಪ್ರೇಮ್‌ಕುಮಾರ್, ಮಾಜಿ ಹೆಚ್.ಸಿ–104 ರವರನ್ನು ಪುನಃ ಸೇವೆಗೆ ತೆಗೆದುಕೊಳ್ಳಲಾಗಿದೆ;

2) ಸದರಿಯವರನ್ನು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ;

3) ಸದರಿಯವರ ವೇತನವನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಎರಡು ವಾರ್ಷಿಕ ವೆತನ ಬಡ್ತಿಯನ್ನು ಇಳಿಸಲಾಗಿದೆ.

4) ಸದರಿಯವರು ಕರ್ತವ್ಯದಿಂದ ಹೊರಗೆ ಉಳಿದ ಅವಧಿಯನ್ನು ಕರ್ತವ್ಯದಿಂದ ಹೊರಗುಳಿದ ಅವಧಿಯೆಂದೇ ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರನ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಆರಕ್ಷಕ ಮಹಾ ನಿರೀಕ್ಷಕರು ಕೇಂದ್ರ ವಲಯ, ಬೆಂಗಳೂರು ಇವರು ಶ್ರೀ ಪ್ರೇಮ್‌ಕುಮಾರ್, ಮಾಜಿ ಹೆಚ್.ಸಿ–104 ಇವರಿಗೆ ಸಂಬಂಧಿಸಿದಂತೆ ದಿ:3–1–96ರ ಆದೇಶದಲ್ಲಿ ಅರ್ಜಿದಾರರ ಅರ್ಜಿಯನ್ನು ಒಮ್ಮೆ ತಿರಸ್ಕರಿಸಿ, ಪುನಃ ನ್ಯಾಯಾಲಯದ ಸೂಚನೆಯಂತೆ ಅಪೀಲನ್ನು ಪರಿಶೀಲಿಸಿ, ದಿ:18–11–99 ರಂದು ಹೊರಡಿಸಲಾಗಿರುವ ಆದೇಶವು ಕಾನೂನು ಬಾಹಿರವಾಗಿರುತ್ತದೆ. ಆದರೆ, ಸದರಿ ಆದೇಶದನ್ವಯ ಈಗಾಗಲೇ ಇವರನ್ನು ಸೇವೆಯಲ್ಲಿ 1999ನೇ ಸಾಲಿನಲ್ಲಿಯೇ ಪುನರ್ ಸ್ಥಾಪಿಸಿರುವುದರಿಂದ, ಈಗ ಇಷ್ಟು ವರ್ಷಗಳ ನಂತರ ಅಂದರೆ 2008ನೇ ಸಾಲಿನಲ್ಲಿ ಸದರಿ ಆದೇಶವನ್ನು ರದ್ದುಗೊಳಿಸುವುದು ಸಮಂಜಸವೆನಿಸುವುದಿಲ್ಲ. ಈ ಹಿನ್ನಲೆಯಲ್ಲಿ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು 34/95–96 ದಿ:18–11–1999 ರ ಆದೇಶವನ್ನು ಸಕ್ರಮಗೊಳಿಸಲು ತೀರ್ಮಾನಿಸಲಾಗಿದೆ ಹಾಗೂ ಶ್ರೀ ಪ್ರೇಮ್ ಕುಮಾರ್ ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿಯನ್ನು ಪರಿಗಣಿಸಲು ಯಾವುದೇ ಸಮರ್ಥನೀಯ ಕಾರಣಗಳಿಲ್ಲದೇ ಇರುವುದರಿಂದ ಇದನ್ನು ತಿರಸ್ಕರಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 91 ಪೊಸಿಅ 2008, ಬೆಂಗಳೂರು, ದಿನಾಂಕ:25ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅಪೀಲು ಪ್ರಾಧಿಕಾರದ ಆದೇಶ ಸಂಖ್ಯೆ:ಅಪೀಲು:34:95–96 ಓ.ಬಿ:87:99–2000 ದಿ:18–11–99 ರಂದು ಹೊರಡಿಸಿದ ಪರಿಷ್ಕೃತ ಆದೇಶವನ್ನು ಸ್ಥಿರೀಕರಿಸಿದೆ. ಶ್ರೀ ಪ್ರೇಮ್ ಕುಮಾರ್, ಸಿ.ಹೆಚ್.ಸಿ.–111, ಸಂಚಾರಿ ನಿಯಂತ್ರಣ ಪೊಲೀಸ್ ಠಾಣೆ, ಕೋಲಾರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1059

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಿ.ವಿ. ರಾಮಚಂದ್ರ, ಸಿ.ಹೆಚ್.ಸಿ–688, ಶಿಕಾರಿಪುರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ ಶಿವಮೊಗ್ಗ ಇವರ ಆದೇಶ ಸಂಖ್ಯೆ:ಸಿಬ್ಬಂದಿ(4) ಶಿಕ್ಷೆ:82:06 ಓ.ಬಿ, 356:2006 ದಿನಾಂಕ:21–10–06
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ:03:ಅಪೀಲು :ಸಿಬ್ಬಂದಿ–2:2007–08; ಓ.ಬಿ. :99:2007–08 ದಿನಾಂಕ: 21–7–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:5–11–2007
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು (2) 126:2007–08 ದಿನಾಂಕ:5–4–2008

**ಪ್ರಸ್ತಾವನೆ:**

ಶ್ರೀ ಶ್ರೀ ಬಿ.ವಿ. ರಾಮಚಂದ್ರ ಸಿ.ಹೆಚ್.ಸಿ–688, ಶಿಕಾರಿಪುರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ದಿ:26–2–2006 ರಂದು ಕಿಟ್ಟದಹಳ್ಳಿ ಗ್ರಾಮದ ಶ್ರೀಮತಿ. ಸಲ್ಮಾಬಾನು ಕೋಂ ಫಕ್ರುದ್ದೀನ್ ರವರು ನೇಣು ಹಾಕಿಕೊಂಡ ಬಗ್ಗೆ ದಿ:26–2–2006 ರಂದು ಶಿಕಾರಿಪುರ ಸರ್ಕಾರಿ ಆಸ್ಪತ್ರೆಯಿಂದ ಬಂದ ಹೆಚ್.ಎಂ.ಆರ್.ನ್ನು ಸ್ವೀಕರಿಸಿ 50/2006ರಲ್ಲಿ ನೊಂದಾಯಿಸಿ ಹೇಳಿಕೆ ಪಡೆಯಲು ಆಸ್ಪತ್ರೆಗೆ ಹೋದ ನೀವು ಶ್ರೀಮತಿ ಸಲ್ಮಾಬಾನು, ರವರು ಮಾತನಾಡದಿದ್ದುದರಿಂದ ಹೇಳಿಕೆ ಪಡೆದಿಲ್ಲವೆಂದು ದಿನಚರಿಯಲ್ಲಿ ನಮೂದಿಸಿದ್ದು, ಸದರಿಯವರು ಮಾತನಾಡುವ ಸ್ಥಿತಿಯಲ್ಲಿ

ಇರದಿದ್ದರೆ, ಅವರ ರಕ್ತ ಸಂಬಂಧಿಗಳ ಅಥವಾ ಇತರೆ ಕುಟುಂಬ ಸದಸ್ಯರ ಹೇಳಿಕೆಗಳನ್ನು ಪಡೆಯದೆ, ಅವಳ ಜೀವಂತ ಹೇಳಿಕೆಯನ್ನು ಪಡೆಯದೆ, ಹೆಚ್.ಎಂ.ಆರ್. ನ್ನು ಹಾಗೆಯೇ ಕಡತದಲ್ಲಿಟ್ಟು, ಕಾನೂನು ಕ್ರಮ ಕೈಗೊಳ್ಳಲು ವಿಫಲವಾಗಿ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿ ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ, ಶೀವಮೊಗ್ಗ ಇವರು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:21–10–06ರ ಆದೇಶದಲ್ಲಿ ಅರ್ಜಿದಾರರಾದ ಶ್ರೀ ಶ್ರೀ ಬಿ.ವಿ. ರಾಮಚಂದ್ರ, ರವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 6 ತಿಂಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೆ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ(2) ರಲ್ಲಿ ಓದಲಾದ ದಿನಾಂಕ: 21–7–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅಪೀಲುದಾರರು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ದಿ:27–2–2006 ರಂದು ಮಧ್ಯಾಹ್ನ 2–15 ರಿಂದ ಠಾಣಾಧಿಕಾರಿಯಾಗಿರುತ್ತಾರೆ. ಇವರು ಠಾಣಾಧಿಕಾರಿಯಾಗಿದ್ದಾಗ ದಿ:26–2–06 ರಂದು ಶ್ರೀಮತಿ ಸಲ್ಮಾಬಾನು ಕೋಂ ಫಕ್ರುದ್ದಿನ್‌ರವರು ನೇಣುಹಾಕಿಕೊಂಡು ಆಸ್ಪತ್ರೆಗೆ ಸೇರಿರುತ್ತಾರೆಂದು ಆಸ್ಪತ್ರೆಯಿಂದ ಬಂದ ಮೆಮೋ ಮೇರೆಗೆ ಅಪೀಲುದಾರರು ಹೆಚ್.ಎಂ.ಆರ್. ಸ್ವೀಕರಿಸಿ 50/06ರಲ್ಲಿ ನಮೂದಿಸಿ ಶ್ರೀಮತಿ ಸಲ್ಮಾಬಾನುರವರ ಹೇಳಿಕೆ ಪಡೆಯಲು ಆಸ್ಪತ್ರೆಗೆ ತೆರಳಿರುತ್ತಾರೆ. ಶ್ರೀಮತಿ ಸಲ್ಮಾಬಾನುರವರು ಪ್ರಜ್ಞಾಹೀನ ಸ್ಥಿತಿಯಲ್ಲಿದ್ದ ಕಾರಣ ಅವರ ಹೇಳಿಕೆ ಪಡೆಯಲು ಆಗಿರುವುದಿಲ್ಲ ಹಾಗೂ ಆಕೆ ಗಂಡನ ಸಂಬಂಧಿಕರಿದ್ದು, ಅವರಿಂದ ಶ್ರೀಮತಿ ಸಲ್ಮಾಬಾನುಳ ತವರು ಮನೆಯ ವಿಳಾಸ ಪಡೆಯದೆ, ರಕ್ತ ಸಂಬಂಧಿಗಳ ಹೇಳಿಕೆ ಪಡೆಯದೆ ಶ್ರೀಮತಿ ಸಲ್ಮಾಬಾನು ನೇಣಿಹಾಕಿಕೊಳ್ಳಲು ಕಾರಣವೇನು?ಎಂಬ ಬಗ್ಗೆ ಮಾಹಿತಿ ಪಡೆದಿಲ್ಲ, ಶ್ರೀಮತಿ ಸಲ್ಮಾಬಾನುರವರನ್ನು ಹೆಚ್ಚಿನ ಚಿಕಿತ್ಸೆಗೆ ಯಾವ ಆಸ್ಪತ್ರೆಗೆ ಕರೆದುಕೊಂಡು ಹೋಗಿದ್ದಾರೆ ಎಂಬ ಬಗ್ಗೆ ಮಾಹಿತಿ ಪಡೆಯದೆ, ಯಾವುದೇ ಕಾನೂನು ಕ್ರಮ ಕೈಗೊಳ್ಳದೆ ಹೆಚ್.ಎಂ.ಆರ್.ನ್ನು ಹಾಗೇಯೆ ಕಡತದಲ್ಲಿರಿಸಿರುತ್ತಾರೆ. ಅಪೀಲುದಾರರು ಪಿ.ಎಸ್.ಐ. ರವರಿಗೆ ವಿಷಯ ತಿಳಿಸಿದ ಕೂಡಲೇ ಶ್ರೀಮತಿ ಸಲ್ಮಾಬಾನು ನೇಣುಹಾಕಿಕೊಳ್ಳಲು ಕಾರಣವೇನು ಎಂಬ ಬಗ್ಗೆ ತವರು ಮನೆಯವರ ಹೇಳಿಕೆಯನ್ನು ಪಡೆಯಲು ಪ್ರಯತ್ನಪಡಬಹುದಿತ್ತು. ಆದರೆ ಅಪೀಲುದಾರರ ಈ ನಿಟ್ಟಿನಲ್ಲಿ ಸಂಪೂರ್ಣ ವಿಫಲರಾಗಿ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ ಮತ್ತು ಲೋಪ ಪ್ರದರ್ಶಿಸಿರುತ್ತಾರೆ. ಶ್ರೀಮತಿ ಸಲ್ಮಾಬಾನು ದಿ:26–2–06 ರಂದು ನೇಣುಹಾಕಿಕೊಂಡು ದಿ:13–6–06 ರಂದು ಮೃತಪಟ್ಟಿದ್ದು, ದಿ:13–6–06 ರಂದು ಗು.ನಂ:183/06 ಕಲಂ, 498(ಎ) 306, ಸಹಿತ 34 ಐಪಿಸಿ ರೀತ್ಯಾ ಪ್ರಕರಣ ದಾಖಲಾಗಿದ್ದು, ನಂತರ ಗಂಡ ಫಕ್ರುದ್ದೀನ್, ಅತ್ತೆ ಪೀರಾಬಿ ಹಾಗೂ ರಾಜಾಸಾಬ್‌ರವರು ವರದಕ್ಷಣೆ ಸಲುವಾಗಿ ನೀಡಿದ ಕಿರುಕುಳದಿಂದ ಮೃತಪಟ್ಟಿರುತ್ತಾಳೆಂದು ತಾಲ್ಲೂಕು ಮ್ಯಾಜಿಸ್ಟ್ರೇಟರ ತನಿಖಾ ಕಾಲದಲ್ಲಿ ತಿಳಿದುಬಂದಿದ್ದರಿಂದ 304 (ಬಿ) ಸಹಿತ 34 ಐಪಿಸಿ & 3 & 4 ಡಿಪಿ ಆಕ್ಟ್ ಅಳವಡಿಸಲು ಮಾನ್ಯ ನ್ಯಾಯಾಲಯಕ್ಕೆ ವರದಿ ನಿವೇದಿಸಿದ್ದಾಗಿ ಅಪೀಲುದಾರರು ದಿ:27–2–2006 ರಂದೇ ಶ್ರೀಮತಿ ಸಲ್ಮಾಬಾನು ನೇಣುಹಾಕಿ ಕೊಳ್ಳಲು ಕಾರಣವೇನು? ಎಂಬ ಬಗ್ಗೆ ಅವರ ತಂದೆ, ತಾಯಿಯ/ರಕ್ತ ಸಂಬಂಧಿಗಳ ಹೇಳಿಕೆ ಪಡೆದಿದ್ದಲ್ಲಿ ಆರೋಪಿಗಳ ವಿರುದ್ಧ ಆಗಲೇ ಕಾನೂನು ಕ್ರಮ ಕೈಗೊಳ್ಳಬಹುದಾಗಿತ್ತು. ಆದರೆ ಅಪೀಲುದಾರರು ಅವರ ಕರ್ತವ್ಯದಲ್ಲಿ ತೀವ್ರ ಲೋಪ, ನಿರ್ಲಕ್ಷ್ಯತೆ ಪ್ರದರ್ಶಿಸಿದ್ದರಿಂದ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 6 ತಿಂಗಳ ಕಾಲ ಮುಂದೂಡಿರುತ್ತದೆ ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು, ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 141 ಪೊಸಿಅ 2008, ಬೆಂಗಳೂರು, ದಿನಾಂಕ:28ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶ್ರೀ ಬಿ.ವಿ. ರಾಮಚಂದ್ರ, ಸಿ.ಹೆಚ್.ಸಿ–688, ಶಿಕಾರಿಪುರ ಪೊಲೀಸ್ ಠಾಣೆ, ಶಿವಮೊಗ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 1060

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## HEALTH AND FAMILY WELFARE SECRETARIAT

**Sub :** Extension of consulting contract of SMEC (India) Pvt. Ltd., and SMEC International Pty. Ltd, Australia -reg

**Read :** 1. Proceedings of the 8th meeting of the Programme Steering Comittee

2. Proceedings of the KFW meeting dated 3rd to 6th March 2008

3. Kfw email dated 14.7.2008

**Preamble:**

The Kfw team visited the project between 3rd and 6th March 2008 and reviewed progerss of Kfw Phase-II works. The Mission discussed extension of the existing consultancy contract between Project and SMEC which was to expire by 01 April 2008 during its visit. The Mission agreed that the consultancy services were satisfactory and the consultants were providing timely and sound professional advice in the day-to day management of the projeect implemntation. They also discussed amending the contract in view of the minor modifications made within the consultancy and the present requirements of the project. Accordingly, a draft amendment to the consulting contract with SMEC (India) Pvt Ltd., and SMEC International Pty. Ltd., Australia was prepared and sent to Kfw Kfw communicated its "no-objection" to the same.

A subject was therefore placed before the 8th meeting of the Programme Steering Committee for approval of extension of the said consulting contract, from 1.4.2008 to March 2010 with 1 year of defect liability period upto 31 March 2011.

The Committee after discussion approved the same

Hence, the following order.

**Government Order No. AD/Kfw/SMEC/2005-06, Bangalore, Dated:21st August 2008**

Under the circumstances mentioned in the preamble, Government are hereby pleased to extend the consulting contract of Kf-II Prijcet with SMEC India Pvt., and SMEC International Pty., Ltd., Australia w.e.f. 1.4.2008 to 31 March 2010 with 1 year of defect liablity period upto 31 March 2011.

KHSDRP shall also ensure that all future payments to the consultant would be against the submission of quarterly progress reports subject to "no-objection" by KHSDRP and Kfw and the KHSDRP and Kfw Mission will ensure timely response to claims of the consultatant.

By Order and in the name of the Government of Karnataka,

P.R. 1197

**SUSHAMA GODBOLE**

Deputy Secretary to Govt. KHSDRP

Health And Family Welfare Department

**KANNADA AND CULTURE, INFORMATION AND TOURISM SECRETARIAT**

**Sub :** Approval of proposal of M/s Hindustan Infrastructure projects and Engineering Pvt. Ltd., to establish a "Super Speciality Complex for Medical Tourism and Skill Development" in IT-BT Corridor Bangalore Urban District or 3rd phase of Harohalli Industial Area, Kanakapura Taluk , Bangalore Rural District-Reg.

**Read :** 1. Proceedings of 8th State High Level Clearance Committee (SHLCC) Meeting held on 23.2.2007

2. Proceedings of 14th State High Level Clearance Committee (SHLCC) metting held on 17.3.2008.

**Preamble:**

Proposal of M/s Hindustan Infraastructure Projecs and Engineering Pvt. Ltd., to establish a "Super Speciality Complex for Medical Tourism and Skill Development" in IT-BT Corridor Bangalore Urban District or 3rd Phase of Harohalli Industrial Area, Kanakapura Taluk, Bangalore Rural District has been approved in the 8th and 14th State High Level Clearance Committee (SHLCC) and to extend the incentives and concession Hence the following order.

**Government Order No. KCIT 18 TIM 2008 (1) Bangalore, Dated:18th June 2008**

Government is pleased to approve the Project Proposal M/s Hindustan Infrastructure Project and Engineering Pvt. Ltd., to establish a "Super Speciality Complex for Medical Tourism and Skill Development" in IT-BT Corridor Bangalore Urban District or 3rd Phase of Harohalli Industrial Area, Kanakapura Taluk, Bangalore Rural District with the following infrastructure facilities, incentives and concessions.

**Infrastructure Facilities:**

**Land:** KIADB to allot 20 acres of land in 3rd Phase, Harohalli Industrial Area. Kanakapura Taluk,. Bangalore Rural as per the request of the company.

**Power:** 1200 KVA power to serviced from CESCOM.

**Water:** 1,00,000lpd to be supplied by KIADB The promoted is advised to set up Sewage Treatment Plant, adopt water recycling and water harvesting.

**Incentives and consessions:** (Medical Tourism Project- Skill Development).

**Environment:** The promoters to obtain CFE from KSPCB and ECC from DFEE, Government of Karnataka. No. civil works shall commence prior to obtaining ECC.

**Employment:** The Company shall prepare a plan for development of human resource required for the project, train local people and provide employment to these trained local youth and comply with Government Policy of employment to local people. Acopy of human resource development plan shall be sent to the Commissioner for I.D. and Director of Industries & Commerce for monitoring.

**Vendor Development:** Wherever there is scope for vendor development for the project the company shall prepare a vendor development plan, develop local vendors and procure the required inputs, services from these local local vendor units. A copy of the vendor development plan shall be sent to the Commissioner for ID & Director of Industries and Commerce for monitoring.

**Social Infrastructure Development**: The company is advised to take up social infrasturcture development projects in the vicinity of proposed location of the unit. A copy of such projeects shall be sent to the Commissioner for I.D. & Director of Industries and Commerce for monitoring.

**Others:** The promoter shall take all statutory and other necessary clearances and shall submit milestones/progress in implementation of the project regularly, which will be monitored by the Departments concerned.

This approval is valid for a period of two years from the date of issue.

By Order and in the name of the Governor of Karnataka

**S. NARAYANAPPA**

Under Secretary to Government

Kannada And Culture, Information And

Tourism Department

**Sub :** Approval of proposal of M/s Hindustan Infrastructure projects and Engineering Pvt. Ltd., Hassan. for development of Golf village and estabklish Retail Mall , Convention Centre and Super Speciality Hospital at Hassan, Hassan District reg.

**Read :** 1. Subject No. 3 (16)-Executive Summary placed before 10th SHLCC meeting.

2. Proceedings of 13th an State High Level Clearance Committee (SHLCC) Meeting held on 13.3.2008.

3. Letter No. Ka Vu Ma/VUNI/NADAVALI/2008-09 at 9.4.2008 and 22.5.2008 of Karnataka Udyoga mitra, Bangalore.

**Preamble:**

Proposal of M/s Hindustan Infraastructure Projects and Engineering Pvt. Ltd., to establish a "Super Speciality Complex for Medical Tourism and Skill Development" in IT-BT Corridor Bangalore Urban District or 3rd Phase of Harohalli Industrial Area, Kanakapura Taluk, Bangalore Rural District has been approved in the 8th and 14th State High Level Clearance Committee (SHLCC) and to extend the incentive and concession. Hence the following order.

**Government Order No. KCIT 18 TIM 2008 (2) Bangalore, Dated:18th June 2008**

Government is pleased to approve the Project Proposal M/s Hindustan Infrastructure Projects and Engineering Pvt. Ltd., to establish a "Super Speciality Complex for Medical Tourism and Skill Development" in IT-BT Corridor Bangalore Urban District or 3rd Phase of Harohalli Industrial Area, Kanakapura Taluk, Bangalore Rural District with the following infrastructure facilities, incentives and concessions.

**Infrastructure Facilities:**

**Land:** KIADB to allot 20 acres of land in 3rd Phase, Harohalli, Industrial Area, Kanakapura Taluk, Bangalore Rural as per the request of the Company.

Power: 1200 KVA power to serviced from CESCOM

**Water:** 1,00,000lpd to be supplied by KIADB The promoted is advised to set au Sewage Treatment Plant, adopt water recycling and water harvesting.

**Incentives and consessions:** (Medical Tourism Project- Skill Development).

**Environment:** The promoters to obtain CFE from KSPCB and ECC from DFEE, Government of Karnataka. No. civil works shall commence prior to obtaining ECC.

**Employment:** The Company shall prepare a plan for development of human resource required for the project, train local people and provide employment to these trained local youth and comply with

Government Policy of employment to local people. A 8copy of human resource development plan shall be sent to the Commissioner for I.D. and Director of Industries & Commerce for monitoring.

**Vendor Development:** Wherever there is scope for vendor development for the project the company shall prepare a vendor development plan, develop local vendors and procure the required inputs, services from these local vendor units. A copy of the vendor development plan shall be sent to the Commissioner for LD & Director of Industries and Commerce for monitoring.

**Social Infrastructure Development:** The company is advised to take up social infrasturcture development projects in the vicinity of proposed location of the unit. A copy of such projeect shall be sent to the Commissioner for I.D. & Director of Industries and Commerce for monitoring.

**Others:** The promoter shall take all statutory and other necessary clearances and shall submit milestones/progress in implementation of the project regularly, which will be monitored by the Departments concerned.

This approval is valid for a period of two years from the date of issue.

By Order and in the name of the Governor of Karnataka

P.R. 959

**S. NARAYANAPPA**

Under Secretary to Government

Kannada And Culture, Information And

Tourism Department

**PERSONNEL AND ADMINISTRATIVE REFORMS SECRETARIAT**

**Sub :** Appointment of Dr. Subhash Bharani as Special Representntive of Karnataka State at New Dehi Terms and conditions of the appointment

**Read :** Notification No. DPAR 67 GAM 2008, dated 30th June 2008.

**PREAMBLE:**

The State Government consider it necessary to appoint a Special Representative of Karnataka State at New Delhi, to interact with the Members of Parliament, Officers, and Ministers in the Government of India to effectively pursue and get projects and other matterss cleared expeditiously to the advantage of the State. Accordingly, Government in Notification dated 30th June 2008 read above, has appointed Dr. Subhash Bharani as Special Representative of Karnataka State at New Delhi with Cabinet Minister's status It is now considered necessary to issue terms and conditions of his appointment Hence this order.

**Government Order No. DPAR 67 GAM 2008, Bangalore, Datedd: 29th July 2008**

In the circumstances explained in the preamble. Dr. Subhash Bharani who has been appointed as Special Representative of Karnataka State at New Delhi is governed by the following terms and conditions:

(a) The period of his appointment shall be co-terminus with the term of the present Government or until further orders whichever is earlier;

(b) He will have his office accommodation at Karnataka Bhavan,New Delhi;

(c) He will draw the pay and allowances admissible to a Cabinet Minister of the State Government.

(d) He will be entitled to have personal staff telephone and transport facillity as provided to a Cabinet Minister of the State Government The staff shall be appointed on deputation or on contract and co-terminus basis;

(e) The Resident Commissioner, Karnataka Bhavan, New Delhi, shall make arrangements for providing a suitable office accommodation, Government vehicle and such other assistance as may be required by him

3. The expenditure shall be debited to the Head of Account "2070-Other Administrative Services-115 Guest Houses, Government Hostels etc., 1 Guest House-01 State Guest House-050 Office Expenses-Karnataka Bhavan, New Delhi"

4. This order issues with the concurrence of the Finance Department vide U.O. Note No. FD/775/Services-1/2008 dated:21-7-2008.

By Order and in the name of the Governor of Karnataka

P.R. 1198

**S. THIPPESWAMY**

Under Secretary to Government

Department of Personnel and Administrative Reforms

(State Protocol)

**ಜಲಸಂಪನ್ಮೂಲ ಸಚಿವಾಲಯ**

**ವಿಷಯ:** ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕು ಹ್ಯಾಟಿ ಏತ ನೀರಾವರಿ ಯೋಜನೆ ರೈಸಿಂಗ್ ಮೇನ್ ಪೈಪುಗಳ ಬದಲಾವಣೆ ಹಾಗೂ ಸುಧಾರಣೆ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1) ದಿನಾಂಕ:5/5/08 ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಂ/ಸನೀ (ಉ)ವ/ತಾಸ/ಸ.ಇಂ.7/2008–09/2570.

2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ:16/6/08ರ ಪತ್ರ ಸಂಖ್ಯೆ:ಮುಸ(ದ)/ತಾಂ.4/ಸ.ಇಂ.10/ಟೆಂಡರ್ ಪರಿಶೀಲನಾ ಸಮಿತಿ/2008/2561.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕು, ಹ್ಯಾಟಿ ಏತ ನೀರಾವರಿ ಯೋಜನೆ ರೈಸಿಂಗ್ ಮೇನ್ ಪೈಪುಗಳ ಬದಲಾವಣೆ ಹಾಗೂ ಸುಧಾರಣೆ ಕಾಮಗಾರಿಯ 17.20 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರು ಸಿ.ಇ.ಆರ್. ಸಂಖ್ಯೆ:69/2007–08, ದಿನಾಂಕ:14/12/2007ರಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕೊಪ್ಪಳ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ದಿನಾಂಕ:5/1/2008 ರಂದು ಕೊಪ್ಪಳ ಜಿಲ್ಲಾ ಟೆಂಡರ್ ಬುಲೆಟಿನ್ ಹಾಗೂ ಪ್ರಮುಖ ದಿನಪತ್ರಿಕೆಯಾದ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ದಿನಾಂಕ:9/1/2008 ರಂದು ಪ್ರಕಟಿಸಲಾಗಿದೆ.

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ 29 ಜನ ಗುತ್ತಿಗೆದಾರರು ಅರ್ಜಿ ಸಲ್ಲಿಸಿ ಟೆಂಡರ್ ಫಾರಂ ಪಡೆದಿದ್ದು, ಅದರಲ್ಲಿ ಮೂವರು ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್ ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರ್ ಗಳನ್ನು ದಿನಾಂಕ:15/3/2008 ರಂದು ತೆರೆಯಲಾಗಿ ಈ ಇಬ್ಬರು ಗುತ್ತಿಗೆದಾರರು ನಮೂದಿಸಿರುವ ದರಗಳ ವಿವರ ಕೆಳಕಂಡಂತಿದೆ:

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 17,03,399/– |
|---|---|---|---|
| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ |
| 1 | ಮಹಮದ್ ಅಸೀಫ್ ಇಕ್ಬಾಲ್,2ನೇದರ್ಜೆ ಗುತ್ತಿಗೆದಾರರು | 20,43,390/– | 19.95 ಹೆಚ್ಚು |
| 2 | ವಣಕೇರಪ್ಪ | 23,32,548/– | 36.93ಹೆಚ್ಚು |

ಮೇಲ್ಕಂಡಂತೆ ಶ್ರೀ ಮಹಮದ್ ಅಸೀಪ್ ಇಕ್ಬಾಲ್, 2ನೇ ದರ್ಜೆ ಗುತ್ತಿಗೆದಾರರು ನಮೂದಿರುವ ಮೊತ್ತ ರೂ. 20,43,390–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಟೆಂಡರ್ ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 19.95 ರಷ್ಟು ಹೆಚ್ಚಾಗಿದ್ದು, ಚಾಲ್ತಿ ದರಪಟ್ಟಿಯ ಮೇಲೆ ಶೇ. 6ಕ್ಕಿಂತ ಹೆಚ್ಚುವರಿ ದರವನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್ ರವರಿಗೆ ಅಧಿಕಾರ ಇಲ್ಲದೇ ಇದ್ದುದರಿಂದ ಸರ್ಕಾರದ ಅನುಮೋದನೆಗಾಗಿ ಮೇಲೆ 1ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಪ್ರಸ್ತಾವನೆ ಸಲ್ಲಿಸಿದ್ದರು.

ಈ ಪ್ರಕರಣವನ್ನು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಮುಂದೆ ಮಂಡಿಸುವಂತೆ ಸೂಚಿಸಿದ್ದರ ಮೇರೆಗೆ ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ:3.6.2008ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಟೆಂಡರಿಗಿಡಲಾದ ಮೊತ್ತ ರೂ. 17,03,399–00ಗಳ ಮೇಲೆ ಶೇಕಡ 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 19,50,390–00ಗಳಿಗೆ ಕಾಮಗಾರಿಯನ್ನು ಶ್ರೀ ಮಹಮದ್ ಅಸೀಪ್ ಇಕ್ಬಾಲ್, 2ನೇ ದರ್ಜೆ ಗುತ್ತಿಗೆದಾರರು ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಿದ್ದು ,ಇದಕ್ಕೆ ಗುತ್ತಿಗೆದಾರರು ಸಮ್ಮತಿ ನೀಡಿರುವುದಾಗಿ ತಿಳಿಸಿ ಸಭೆಯ ನಡವಳಿಗಳೊಂದಿಗೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 34 ಏನೀಯೋ 2008, ಬೆಂಗಳೂರು,ದಿನಾಂಕ:23ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕು, ಹ್ಯಾಟಿ ಏತ ನೀರಾವರಿ ಯೋಜನೆ ರೈಸಿಂಗ್ ಮೇನ್ ಪೈಪುಗಳ ಬದಲಾವಣೆ ಹಾಗೂ ಸುಧಾರಣೆ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಟೆಂಡರಿಗೆ ಇಡಲಾದ ಮೊತ್ತ ರೂ. 17,03,399–00ಗಳ ಮೇಲೆ ಶೇಕಡ 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 19,50,390–00ಗಳಿಗೆ (ಹತ್ತೊಂಭತ್ತು ಲಕ್ಷದ ಐವತ್ತು ಸಾವಿರದ ಮುನ್ನೂರ ತೊಂಭತ್ತು ರೂ.ಗಳು ಮಾತ್ರ) ಶ್ರೀ ಮಹಮದ್ ಅಸೀಫ್ ಇಕ್ಬಾಲ್, 2ನೇ ದಜೆ ಗುತ್ತಿಗೆದಾರರು, ವಡ್ಡರಹಟ್ಟಿ, ಗಂಗಾವತಿ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗೊಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವದಿಯಲ್ಲಿ ಪೂರ್ಣಗೊಳಿಸತಕ್ಕದ್ದು,
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಂಗೀಕರಿಸಿದ ಮೇಲ್ಕಂಡ ಮೊತ್ತಕ್ಕಿಂತ ಹೆಚ್ಚುವರಿಯಾಗಿ ಯಾವುದೇ ಕ್ಲೇಮುಗಳನ್ನು ಸರ್ಕಾರವು ಪರಿ ಗಣಿಸುವುದಿಲ್ಲ.
4. ಕಾರ್ಯಪಾಲಕ ಅಭಿಯಂತರರು ಗುತ್ತಿಗೆದಾರರೊಂದಿಗೆ ಕರಾರು ಮಾಡಿಕೊಳ್ಳುವ ಸಮಯದಲ್ಲಿ ಒಪ್ಪಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚುವರಿಯಾಗಿ ಗುತ್ತಿಗೆದಾರರ ಯಾವುದೇ ಕ್ಲೇಮುಗಳನ್ನು ಪರಿಗಣಿಸುವುದಿಲ್ಲವೆಂದು ಕರಾರಿನಲ್ಲಿ ನಮೂದಿಸತಕ್ಕದ್ದು,
5. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/1/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1117

**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕು ಹಿರೇಬಗನಾಳ ಏತ ನೀರಾವರಿ ಯೋಜನೆ ರೈಸಿಂಗ್ ಮೇನ್ ಪೈಪುಗಳ ಬದಲಾವಣೆ ಹಾಗೂ ಸುಧಾರಣೆ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1) ದಿನಾಂಕ:5/5/08 ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ:ಮುಇಂ/ಸನೀ (ಉ)ವ/ತಾಸ/ಸ.ಇಂ.7/2008–09/2569

2. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ:16/6/08ರ ಪತ್ರ ಸಂಖ್ಯೆ:ಮುಸ(ದ)/ತಾಂ.4/ಸ.ಇಂ.10/ಟೆಂಡರ್ ಪರಿಶೀಲನಾ ಸಮಿತಿ/2008/2561.

**ಪ್ರಸ್ತಾವನೆ:**

ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕು, ಹಿರೇಬಗನಾಳ ಏತ ನೀರಾವರಿ ಯೋಜನೆ ರೈಸಿಂಗ್ ಮೇನ್ ಪೈಪುಗಳ ಬದಲಾವಣೆ ಹಾಗೂ ಸುಧಾರಣೆ ಕಾಮಗಾರಿಯ 14.75 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಸಿ.ಇ.ಆರ್. ಸಂಖ್ಯೆ:67/2007–08, ದಿನಾಂಕ:14/12/2007ರಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಕೊಪ್ಪಳ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ದಿನಾಂಕ:5/1/2008 ರಂದು ಕೊಪ್ಪಳ ಜಿಲ್ಲಾ ಟೆಂಡರ್ ಬುಲೆಟಿನ್ ಹಾಗೂ ಪ್ರಮುಖ ದಿನಪತ್ರಿಕೆಯಾದ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ದಿನಾಂಕ:9/1/2008 ರಂದು ಪ್ರಕಟಿಸಲಾಗಿದೆ. ಕಾರಣಾಂತರಗಳಿಂದ ಈ ಅಧಿಸೂಚನೆಯನ್ನು ಮುಂದೂಡಿ ಅಂತಿಮವಾಗಿ ದಿನಾಂಕ:20–2–08ರಂದು ಅಧಿಸೂಚನೆ ಹೊರಡಿಸಲಾಗಿದೆ.

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ 23 ಜನ ಗುತ್ತಿಗೆದಾರರು ಅರ್ಜಿ ಸಲ್ಲಿಸಿ ಟೆಂಡರ್ ಫಾರಂ ಪಡೆದಿದ್ದು, ಅದರಲ್ಲಿ ಇಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್ ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಟೆಂಡರ್‌ಗಳನ್ನು ದಿನಾಂಕ:15/3/2008 ರಂದು ತೆರೆಯಲಾಗಿ ಈ ಇಬ್ಬರು ಗುತ್ತಿಗೆದಾರರು ನಮೂದಿಸಿರುವ ದರಗಳ ವಿವರ ಕೆಳಕಂಡಂತಿದೆ:

| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 14,57,025/– |
|---|---|---|---|
| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ |
| 1 | ಅಶೋಕ ಬಳ್ಳೊಳ್ಳಿ ಗುತ್ತಿಗೆದಾರರು | 16.01.673/– | 9.92 ಹೆಚ್ಚು |
| 2 | ಜಿ. ರುದ್ರೇಗೌಡ | 16,43,790/– | 12.81 ಹೆಚ್ಚು |

ಮೇಲ್ಕಂಡಂತೆ ಶ್ರೀ ಅಶೋಕ ಬಳ್ಳೊಳ್ಳಿ, ಗುತ್ತಿಗೆದಾರರು ನಮೂದಿರುವ ಮೊತ್ತ ರೂ. 16,01,673–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಟೆಂಡರ್ ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 9.92 ರಷ್ಟು ಹೆಚ್ಚಾಗಿದ್ದು, ಶೇ. 6ಕ್ಕಿಂತ ಹೆಚ್ಚುವರಿ ದರವನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರಿಗೆ ಅಧಿಕಾರ ಇಲ್ಲದೇ ಇದ್ದುದರಿಂದ ಸರ್ಕಾರದ ಅನುಮೋದನೆಗಾಗಿ ಮೇಲೆ 1ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರು ಪ್ರಸ್ತಾವನೆ ಸಲ್ಲಿಸಿದ್ದರು.

ಈ ಪ್ರಕರಣವನ್ನು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಮುಂದೆ ಮಂಡಿಸುವಂತೆ ಸೂಚಿಸಿದ್ದರ ಮೇರೆಗೆ ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು

ದಿನಾಂಕ:3.6.2008ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಟೆಂಡರಿಗಿಡಲಾದ ಮೊತ್ತ ರೂ. 14,57,025–00ಗಳ ಮೇಲೆ ಶೇಕಡ 9.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 15,95,442–00ಗಳಿಗೆ ಕಾಮಗಾರಿಯನ್ನು ಶ್ರೀ ಅಶೋಕ ಬಳ್ಳೊಳ್ಳಿ ಗುತ್ತಿಗೆದಾರರು ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಿದ್ದು ,ಇದಕ್ಕೆ ಗುತ್ತಿಗೆದಾರರು ಸಮ್ಮತಿ ನೀಡಿರುವುದಾಗಿ ತಿಳಿಸಿ ಸಭೆಯ ನಡವಳಿಗಳೊಂದಿಗೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 35 ಏನೀಯೋ 2008, ಬೆಂಗಳೂರು,ದಿನಾಂಕ:23ನೇ ಜುಲೈ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಪ್ಪಳ ಜಿಲ್ಲೆ, ಕೊಪ್ಪಳ ತಾಲ್ಲೂಕು, ಹಿರೇಬಗನಾಳ ಏತ ನೀರಾವರಿ ಯೋಜನೆ ರೈಸಿಂಗ್ ಮೇನ್ ಪೈಪುಗಳ ಬದಲಾವಣೆ ಹಾಗೂ ಸುಧಾರಣೆ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಟೆಂಡರಿಗೆ ಇಡಲಾದ ಮೊತ್ತ ರೂ. 14,57,025–00ಗಳ ಮೇಲೆ ಶೇಕಡ 9.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 15,95,442–00ಗಳಿಗೆ (ಹದಿನೈದು ಲಕ್ಷದ ತೊಂಭತ್ತೈದು ಸಾವಿರದ ನಾನೂರ ನಲವತ್ತೆರಡು ರೂ.ಗಳು ಮಾತ್ರ) ಶ್ರೀ ಅಶೋಕ ಬಳ್ಳೊಳ್ಳಿ, ಗುತ್ತಿಗೆದಾರರು, ಕುಷ್ಟಗಿ ಇವರಿಗೆ ಕಾಮಗಾರಿಯನ್ನು ಈ ಕೆಳಕಂಡ ಷರತ್ತುಗೊಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವದಿಯಲ್ಲಿ ಪೂರ್ಣಗೊಳಿಸತಕ್ಕದ್ದು,

2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

3. ಅಂಗೀಕರಿಸಿದ ಮೇಲ್ಕಂಡ ಮೊತ್ತಕ್ಕಿಂತ ಹೆಚ್ಚುವರಿಯಾಗಿ ಯಾವುದೇ ಕ್ಲೇಮುಗಳನ್ನು ಸರ್ಕಾರವು ಪರಿ ಗಣಿಸುವುದಿಲ್ಲ.

4. ಕಾರ್ಯಪಾಲಕ ಅಭಿಯಂತರರು ಗುತ್ತಿಗೆದಾರರೊಂದಿಗೆ ಕರಾರು ಮಾಡಿಕೊಳ್ಳುವ ಸಮಯದಲ್ಲಿ ಒಪ್ಪಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚುವರಿಯಾಗಿ ಗುತ್ತಿಗೆದಾರರ ಯಾವುದೇ ಕ್ಲೇಮುಗಳನ್ನು ಪರಿಗಣಿಸುವುದಿಲ್ಲವೆಂದು ಕರಾರಿನಲ್ಲಿ ನಮೂದಿಸತಕ್ಕದ್ದು,

5. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/1/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1116

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ದಾವಣಗೆರೆ–ಹರಿಹರ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆ (ಪರಿಷ್ಕೃತ–1)ಕ್ಕೆ ಸರ್ಕಾರದ ಅಂತಿಮ ಅನುಮೋದನೆ ನೀಡುವ ಕುರಿತು..

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ನಅಇ 04 ಬೆರೂಪ್ರಾ 2007 ದಿನಾಂಕ:11.1.2007

2. ಆಯುಕ್ತರು, ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರ ದಾವಣಗೆರೆ ಇವರ ಪತ್ರ ಸಂ:ದಾನಪ್ರಾ:ಯೋವಿ:ಅಮಯೋ; 107:2007–08:3277 ದಿ:6.3.2008

3. ದಿನಾಂಕ:24.6.2008 ರಂದು ಕಡತ ಸಂಖ್ಯೆ: ನಯೋ (12): ಉನಿ(ಕೆ.ಕಾ): ದಾ:ಹಮಯೋ: ಅಂತಿಮ :230:08–09ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರ ಸರ್ಕಾರದ ಆದೇಶದಲ್ಲಿ ದಾವಣಗೆರೆ–ಹರಿಹರ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪರಿಷ್ಕತ–1)ಕ್ಕೆ ಸರ್ಕಾರದ ತಾತ್ಕಾಲಿಕ ಅನುಮೋದನೆಯನ್ನು ನೀಡಿ ಆದೇಶಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು, ದಾವಣಗೆರೆ–ಹರಿಹರ ನಗರಾಭಿವೃದ್ಧಿ ಪ್ರಾಧಿಕಾರವು ದಾವಣಗೆರೆ–ಹರಿಹರ ಸ್ಥಳೀಯ ಯೋಜನಾ ಪ್ರದೇಶಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ ಕಲಂ 13(1)ರನ್ವಯ ಅಗತ್ಯ ಕ್ರಮ ಜರುಗಿಸಿ, ಮಹಾಯೋಜನೆ (ಪರಿಷ್ಕೃತ–1)ಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ, ಪ್ರಾಧಿಕಾರದ ಸಭೆಯಲ್ಲಿ ಮಂಡಿಸಿ, ಶಿಫಾರಸ್ಸಿನೊಂದಿಗೆ ಸರ್ಕಾರದ ಅಂತಿಮ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ನಗರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ ದಾವಣಗೆರೆ ನಗರ ಜನಸಂಖ್ಯೆಯ 2021ನೇ ಇಸವಿಗೆ 6.75 ಲಕ್ಷಗಳಷ್ಟು ಬೆಳವಣಿಗೆ ಆಗಬಹುದೆಂದು ಅಂದಾಜಿಸಿ, ಮಹಾ ಯೋಜನೆಯನ್ನು ತಯಾರಿಸಲಾಗಿದೆ. ದಾವಣಗೆರೆ–ಹರಿಹರ ಸ್ಥಳಿಯ ಯೋಜಣಾ ಪ್ರದೇಶದ 25007 ಹೆಕ್ಟೇರ್ ಪ್ರದೇಶದಲ್ಲಿ 6229.78 ಹೆಕ್ಟೇರ್ ಪ್ರದೇಶವನ್ನು ದಾವಣಗೆರೆ ನಗರದ ನಗರೀಕರಣದ ಎಲ್ಲೆಯೆಂದು ಹಾಗೂ 2099.81 ಹೆಕ್ಟೇರ್ ಪ್ರದೇಶವನ್ನು ನಗರೀಕರಣ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 12ರಲ್ಲಿನ ಅಂಶಗಳನ್ನು ಪರಿಗಣಿಸಿ, ದಾವಣಗೆರೆ ನಗರದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ 6229.78 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 2808.01 ಹೆಕ್ಟೇರ್ (ಶೇ 45.07) ವಾಣಿಜ್ಯಕ್ಕಾಗಿ 292.70 ಹೆಕ್ಟೇರ್ (ಶೇ. 4.70), ಕೈಗಾರಿಕೆಗಾಗಿ 643.80 ಹೆಕ್ಟೇರ್ (ಶೇ. 10.33), ಸಾರ್ವಜನಿಕ ಅರೆಸಾರ್ವಜನಿಕ ಉಪಯೋಗಕ್ಕೆ 422.09 ಹೆಕ್ಟೇರ್ (ಶೇ. 6.78), ಉದ್ಯಾನವನ ಬಯಲು ಜಾಗಗಳಿಗೆ 539.73 ಹೆಕ್ಟೇರ್ (ಶೇ. 8,66), ನಾಗರೀಕ ಸೌಲಭ್ಯಕ್ಕಾಗಿ 46.10 ಹೆಕ್ಟೇರ್ (ಶೇ. 0.74) ಹಾಗೂ ಸಾರಿಗೆ ಮತ್ತು ಸಂಪರ್ಕಕ್ಕಾಗಿ 1310.44 ಹೆಕ್ಟೇರ್ (ಶೇ 21.04) ಮತ್ತು ಜಲಾವೃತ ಪ್ರದೇಶಕ್ಕಾಗಿ 166.91 ಹೆಕ್ಟೇರ್ (2.68) ಪ್ರದೇಶವನ್ನು ನಿಗಧಿಪಡಿಸಲಾಗಿದೆ.

ಹರಿಹರ ಪಟ್ಟಣದ ಜನಸಂಖ್ಯೆಯು 2021ನೇ ಇಸವಿಗೆ 1.5 ಲಕ್ಷಗಳಷ್ಟು ಬೆಳವಣಗಿಎ ಆಗಬಹುದೆಂದು ಅಂದಾಜಿಸಿ ಮಹಾ ಯೋಜನೆಯನ್ನು ತಯಾರಿಸಲಾಗಿದೆ. ದಾವಣಗೆರೆ ಹರಿಹರ ಸ್ಥಳೀಯ ಯೋಜನಾ ಪ್ರದೇಶದ 25007 ಹೆಕ್ಟೇರ್ ಪ್ರದೇಶದಲ್ಲಿ 2099.81 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಹಾಗೂ 2099.81 ಹೆಕ್ಟೇರ್ ಪ್ರದೇಶವನ್ನು ಹರಿಹರ ಪಟ್ಟಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 12 ರಲ್ಲಿನ ಅಂಶಗಳನ್ನು ಪರಿಗಣಿಸಿ, ಹರಿಹರ ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ ಒಟ್ಟು 2099.81 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 1042.67 ಹೆಕ್ಟೇರ್, ವಾಣಿಜ್ಯಕ್ಕಾಗಿ 110.16 ಹೆಕ್ಟೇರ್, ಕೈಗಾರಿಕೆಗಾಗಿ 195.54 ಹೆಕ್ಟೇರ್, ಸಾರ್ವಜನಿಕ ಅರೆಸಾರ್ವಜನಿಕ ಉಪಯೋಗಕ್ಕೆ 111.86 ಹೆಕ್ಟೇರ್ ಉದ್ಯಾನವನ,ಬಯಲು ಜಾಗಗಳಿಗೆ 216.67 ಹೆಕ್ಟೇರ್, ನಾಗರೀಕ ಸೌಲಭ್ಯಕ್ಕಾಗಿ 20.20 ಹೆಕ್ಟೇರ್ ಹಾಗೂ ಸಾರಿಗೆ ಮತ್ತು ಸಂಪರ್ಕಕ್ಕಾಗಿ 392.67 ಹೆಕ್ಟೇರ್ ಹಾಗೂ ಜಲಾವೃತ ಪ್ರದೇಶಕ್ಕಾಗಿ 10.04 ಹೆಕ್ಟೇರ್ ಪ್ರದೇಶವನ್ನು ನಿಗದಿಪಡಿಸಲಾಗಿದೆ. ಮಹಾಯೋಜನೆ (ಪರಿಷ್ಕೃತ–1) ಯನ್ನು ಅನುಷ್ಠಾನಗೊಳಿಸಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3)ರ ಪ್ರಕಾರ ಅಂತಿಮ ಅನುಮೋದನೆ ನೀಡಲು ಈ ಕೆಳಗಿನ ಷರತ್ತುಗಳೊಂದಿಗೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

1) ದಾವಣಗೆರೆ ನಗರದ ಮಹಾಯೋಜನೆಯ ಪ್ಲಾನಿಂಗ್ ಡಿಸ್ಟ್ರಿಕ್ಟ್ 5ರಲ್ಲಿ ಕುಂದವಾಡ ಕೆರೆಗೆ ಲಗತ್ತಾಗಿ ಪ್ರಸ್ತಾಪಿಸಿರುವ ನಗರ ಮಟ್ಟದ ಉದ್ಯಾನವನ (City level Park) ಪ್ರದೇಶದ ಮಧ್ಯದಲ್ಲಿರುವ ಶಾಬನೂರು ಗ್ರಾಮದ ರಿ.ಸ.ಸಂ.14 ರಿಂದ 20 ರವರೆಗಿನ ಜಮೀನಗಳಲ್ಲಿ ಕಾಯ್ದಿರಿಸಿರುವ ವಸತಿ/ವಾಣಿಜ್ಯ ಉಪಯೋಗದ ವಿಸ್ತೀರ್ಣವನ್ನು ರಿ.ಸ.ನಂ. 18,19,20 ನ್ನು ಸರ್ಕಾರವು ತಾತ್ಕಾಲಿಕ ಅನುಮೋದನೆ ನೀಡುವ ಸಂದರ್ಭದಲ್ಲಿ ವಿದಿಸಿದ್ದ ಷರತ್ತಿನಮಂತೆ ನಗರ ಮಟ್ಟದ ಉದ್ಯಾನವನಕ್ಕಾಗಿ ಹಾಗೂ ಸರ್ವೆ ನಂ. 14 ರಿಂದ 17 ರವರೆಗಿನ ಪ್ರದೇಶವನ್ನು ತಾತ್ಕಾಲಿಕ ಅನುಮೋದಿತ ಮಹಾ ಯೋಜನೆಯಂತೆ ನಗರ ಮಟ್ಟದ ಉದ್ಯಾನವನ ಉಪಯೋಗವೆಂದು ಪರಿಗಣಿಸತಕ್ಕದ್ದು, ಸಂಪೂರ್ಣವಾಗಿ ಯೋಜನಾ ತತ್ವದಡಿಯಲ್ಲಿ ಉದ್ಯಾನವನಕ್ಕಾಗಿಯೇ ಮೀಸಲಿಟ್ಟ ಉಪಯೋಗವೆಂದು ಪರಿಗಣಿಸತಕ್ಕದ್ದು.

2) ಕುಂದವಾಡ ಗ್ರಾಮದ ಸ.ನಂ 182 ರಲ್ಲಿ ಪ್ರಧಾನ ವಸತಿ ವಲಯದ ಮಧ್ಯಭಾಗದಲ್ಲಿ ಸಾರ್ವಜನಿಕ:ಅರೆ ಸಾರ್ವಜನಿಕ ಉಪಯೋಗಕ್ಕಾಗಿ ಗುರುತಿಸಿರುವ ತುಂಡು ಜಮೀನಿನ ಭೂ ಉಪಯೋಗವನ್ನು ವಾಸದ ಉಪಯೋಗ ಎಂದು ಪರಿಗಣಿಸತಕ್ಕದ್ದು.

3) ಕುಂದುವಾಡ ಗ್ರಾಮದ ಸ.ನಂ. 21ರಲ್ಲಿ ಪ್ರಸ್ತಾಪಿಸಿರುವ ಭೂ ಉಪಯೋಗ ತಪ್ಪಾಗಿದ್ದು (Cartographical error) ಹಾಲಿ ಭೂ ಉಪಯೋಗ ನಕ್ಷೆಯನ್ವಯ ವಾಣಿಜ್ಯ ಉಪಯೋಗ ಎಂದು ಪರಿಗಣಿಸತಕ್ಕದ್ದು.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 81 ಬೆಂರೂಪ್ರಾ 2008, ಬೆಂಗಳೂರು ದಿನಾಂಕ: ಜುಲೈ 2008**

ದಾವಣಗೆರೆ–ಹರಿಹರ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪರಿಸ್ಕೃತ–1) ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3)ರನ್ವಯ ಈ ಕೆಳಗಿನ ಷರತ್ತುಗಳಿಗೊಳಪಟ್ಟು ಸರ್ಕಾರವು ಅಂತಿಮ ಅನುಮೋದನೆ ನೀಡಲಾಗಿದೆ.

1) ದಾವಣಗೆರೆ ನಗರದ ಮಹಾಯೋಜನೆಯ ಪ್ಲಾನಿಂಗ್ ಡಿಸ್ಟ್ರಿಕ್ಟ್ 5ರಲ್ಲಿ ಕುಂದವಾಡ ಕೆರೆಗೆ ಲಗತ್ತಾಗಿ ಪ್ರಸ್ತಾಪಿಸಿರುವ ನಗರ ಮಟ್ಟದ ಉದ್ಯಾನವನ (City level Park) ಪ್ರದೇಶದ ಮಧ್ಯದಲ್ಲಿರುವ ಶಾಬನೂರು ಗ್ರಾಮದ ರಿ.ಸ.ಸಂ.14 ರಿಂದ 20 ರವರೆಗಿನ ಜಮೀನಗಳಲ್ಲಿ ಕಾಯ್ದಿರಿಸಿರುವ ವಸತಿ/ವಾಣಿಜ್ಯ ಉಪಯೋಗದ ವಿಸ್ತೀರ್ಣಾವನ್ನು ರಿ.ಸ.ನಂ. 18,19,20 ನ್ನು ಸರ್ಕಾರವು ತಾತ್ಕಾಲಿಕ ಅನುಮೋದನೆ ನೀಡುವ ಸಂದರ್ಭದಲ್ಲಿ ವಿದಿಸಿದ್ದ ಷರತ್ತಿನಂತೆ ನಗರ ಮಟ್ಟದ ಉದ್ಯಾನವನಕ್ಕಾಗಿ ಹಾಗೂ ಸರ್ವೆ ನಂ. 14 ರಿಂದ 17 ರವರೆಗಿನ ಪ್ರದೇಶವನ್ನು ತಾತ್ಕಾಲಿಕ ಅನುಮೋದಿತ ಮಹಾ ಯೋಜನೆಯಂತೆ ನಗರ ಮಟ್ಟದ ಉದ್ಯಾನವನ ಉಪಯೋಗವೆಂದು ಪರಿಗಣಿಸತಕ್ಕದ್ದು, ಸಂಪೂರ್ಣವಾಗಿ ಯೋಜನಾ ತತ್ವದಡಿಯಲ್ಲಿ ಉದ್ಯಾನವನಕ್ಕಾಗಿಯೇ ಮೀಸಲಿಟ್ಟ ಉಪಯೋಗವೆಂದು ಪರಿಗಣಿಸತಕ್ಕದ್ದು.

2) ಕುಂದವಾಡ ಗ್ರಾಮದ ಸ.ನಂ 182 ರಲ್ಲಿ ಪ್ರಧಾನ ವಸತಿ ವಲಯದ ಮಧ್ಯಭಾಗದಲ್ಲಿ ಸಾರ್ವಜನಿಕ:ಅರೆ ಸಾರ್ವಜನಿಕ ಉಪಯೋಗಕ್ಕಾಗಿ ಗುರುತಿಸಿರುವ ತುಂಡು ಜಮೀನಿನ ಭೂ ಉಪಯೋಗವನ್ನು ವಾಸದ ಉಪಯೋಗ ಎಂದು ಪರಿಗಣಿಸತಕ್ಕದ್ದು.

3) ಕುಂದುವಾಡ ಗ್ರಾಮದ ಸ.ನಂ. 21ರಲ್ಲಿ ಪ್ರಸ್ತಾಪಿಸಿರುವ ಭೂ ಉಪಯೋಗ ತಪ್ಪಾಗಿದ್ದು (Cartographical error) ಹಾಲಿ ಭೂ ಉಪಯೋಗ ನಕ್ಷೆಯನ್ವಯ ವಾಣಿಜ್ಯ ಉಪಯೋಗ ಎಂದು ಪರಿಗಣಿಸತಕ್ಕದ್ದು.

ಮಹಾಯೋಜನೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1120

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಶಂಭುಲಿಂಗಪ್ಪ ಹಕ್ಕಿ 2006ನೇ ಸಾಲಿನ ಗೆಜೆಟೆಡ್ ಪ್ರೊಬೇಷನರಿ ತಹಶೀಲ್ದಾರ್ ಗುಂಪು–ಬಿ ಹುದ್ದೆಯಿಂದ ಬಿಡುಗಡೆಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ:ಆರ್‌ಡಿ 51 ಎಎಸ್‌ಡಿ 2008, ದಿನಾಂಕ:23.5.2008.
2. ಸರ್ಕಾರದ ಅಧಿಕೃತ ಜ್ಞಾಪನ ಸಂ:ಕಂಇ 223 ಎಎಸ್‌ಡಿ 2008, ದಿನಾಂಕ:11–6–2008.
3. ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪತ್ರ ಸಂ:ಇಎಸ್‌ಟಿ (1) ಸಿಆರ್:18/2008–09, ದಿನಾಂಕ:25.7.2008.
4. ಶ್ರೀ ಶಂಭುಲಿಂಗಪ್ಪ ಹಕ್ಕಿ, ಪರೀಕ್ಷಾರ್ಥ ತಹಶೀಲ್ದಾರ್ ಇವರ ಮನವಿ ದಿನಾಂಕ:24.7.2008.

**ಪ್ರಸ್ತಾವನೆ:**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1977ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ: E(1)872/2007-08/PSC, Dt:10-1-2008 ರನ್ವಯ ಆಯ್ಕೆಗೊಂಡ 2006ನೇ ಸಾಲಿನ 40 ಅಭ್ಯರ್ಥಿಗಳನ್ನು ಮೇಲೆ ಓದಲಾದ ಕ್ರ.ಸಂ. (1)ರ ದಿನಾಂಕ:23.5.2008ರ ಸರ್ಕಾರದ ಅಧಿಸೂಚನೆಯಲ್ಲಿ ತಹಶೀಲ್ದಾರ್, ಗ್ರೂಪ್–ಬಿ ಹುದ್ದೆಗೆ ಪರಿವೀಕ್ಷಣೆಯ ಮೇಲೆ ನೇಮಿಸಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರರಾಗಿ ನೇಮಕಗೊಂಡ (ಕ್ರ.ಸಂ. 18) ಶ್ರೀ ಶಂಭುಲಿಂಗಪ್ಪ ಹಕ್ಕಿ ಇವರು: 9–6–2008ರಂದು ಕಂದಾಯ ಇಲಾಖೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರ್ ಹುದ್ದೆಗೆ ಹಾಜರಾಗಿರುತ್ತಾರೆ. ಮೇಲೆ ಓದಲಾದ ಕ್ರ.ಸಂ. (2) ದಿನಾಂಕ:11–6–2008 ಅನ್ವಯ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ತರಬೇತಿಗೆ ನಿಯೋಜಿಸಲಾಗಿದ್ದು, ಪ್ರಸ್ತುತ ತರಬೇತಿಯಲ್ಲಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (3)ರ ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಪತ್ರದಲ್ಲಿ ಶ್ರೀ ಶಂಭುಲಿಂಗಪ್ಪ ಹಕ್ಕಿ ಇವರನ್ನು ತಹಶೀಲ್ದಾರ್ ಗುಂಪು–ಬಿ ಹುದ್ದೆಯಿಂದ ಬಿಡುಗಡೆಗೊಳಿಸಲು ಕೋರಿ, ಶ್ರೀ ಶಂಭುಲಿಂಗಪ್ಪ ಹಕ್ಕಿ ಇವರು ದಿನಾಂಕ:24.7.2008ರ ಮನವಿಯೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯೊಂದಿಗೆ ಸಲ್ಲಿಸಿರುತ್ತಾರೆ. ಸದರಿ ಜಿಲ್ಲಾಧಿಕಾರಿಗಳ

ಪ್ರಸ್ತಾವನೆಯಲ್ಲಿ ಶ್ರೀ ಶಂಭುಲಿಂಗಪ್ಪ ಹಕ್ಕಿ ಪರೀಕ್ಷಾರ್ಥ ತಹಶೀಲ್ದಾರ್ ಇವರು ಕೇಂದ್ರ ಲೋಕಸೇವಾ ಆಯೋಗ ನಡೆಸಿದ ನಾಗರೀಕ ಸೇವಾ ಪರೀಕ್ಷೆ 2007–ಐ.ಎ.ಎಸ್ ಹುದ್ದೆಗೆ ಆಯ್ಕೆಯಾಗಿದ್ದು, ತರಬೇತಿಗಾಗಿ ಲಾಲ್ ಬಹದ್ದೂರ್ ಶಾಸ್ತ್ರಿ ಅಕಾಡೆಮಿ ಮಸ್ಸೂರಿ ಇಲ್ಲಿಗೆ ಹಾಜರಾಗಬೇಕಾಗಿದ್ದು, ಅದರಂತೆ ಶ್ರೀಯುತರಿಗೆ ದಿನಾಂಕ:2.8.2008 ರಂದು ತಹಶೀಲ್ದಾರ್ ಗುಂಪು–ಬಿ ಹುದ್ದೆಯಿಂದ ಬಿಡುಗಡೆಗೊಳಿಸಿ ಸೂಕ್ತ ಆದೇಶ ಹೊರಡಿಸುವಂತೆ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಶ್ರೀ ಶಂಭುಲಿಂಗಪ್ಪ ಹಕ್ಕಿ, ಪರೀಕ್ಷಾರ್ಥ ತಹಶೀಲ್ದಾರ್, 2006ನೇ ತಂಡ ಇವರ ಮನವಿಯನ್ನು ಒಪ್ಪಿ ತಹಶೀಲ್ದಾರ್ ಗುಂಪು–ಬಿ ಹುದ್ದೆಯಿಂದ ಬಿಡುಗಡೆಗೊಳಿಸಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 327 ಎಎಸ್‌ಡಿ 2008, ಬೆಂಗಳೂರು, ದಿನಾಂಕ:4ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಶಂಭುಲಿಂಗಪ್ಪ ಹಕ್ಕಿ ಪರಿವೀಕ್ಷಣಾ ತಹಶೀಲ್ದಾರ್, 2006ನೇ ತಂಡ, ಪ್ರಸ್ತುತ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ತರಬೇತಿಯಲ್ಲಿರುವ ಇವರು ಕೇಂದ್ರ ಲೋಕಸೇವಾ ಆಯೋಗ ನಡೆಸಿದ ನಾಗರೀಕ ಸೇವಾ ಪರೀಕ್ಷೆ 2007– ಐ.ಎ.ಎಸ್ ಹುದ್ದೆಗೆ ಆಯ್ಕೆಯಾಗಿರುವುದರಿಂದ, ತಹಶೀಲ್ದಾರ್ ಗುಂಪು–ಬಿ ಹುದ್ದೆಯಿಂದ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಬಿಡುಗಡೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1163

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**FOREST, ECOLOGY & ENVIRONMENT SECRETARIAT**

**Sub :** Reconstitution of the Appellate Authority under the Water (Prevention and Control of Pollution) Act, 1974 and the Air (Prevention and Control of Pollution) Act, 1981.

**Read :** 1. Notification No. FEE 17 EAA 99(i) DT 23.10.2003

2. Govt of India, Ministry of Environment & Forests letter No. Q-17013/2/99-CPW, DT 30.5.2001

3. Lr. No. RPS 52/2001, DT 25.3.2008 from the Registrar General, High Court of Karnataka, B'lore.

**PREAMBLE:**

The Appellate Authority to be constituted under Section 28 of the Water (Prevention and Control of Pollution) Act, 1974 and under Section 31 of the Air (Prevention and Control of Pollution) Act, 1981 was last reconstituted in Notification read at (1) above. In letter cited at (2) above, Govt of India Ministry of Environment and Forests have referred to the judgement/order dated 27.1.1999 rendered by the Hon'ble Supreme Court in the matter of A.P. Pollution Control Board Vs. Prof M.V. Nayudu & Others (Civil Appeal No. 360-371 of 1999) wherein, inter alia, the Hon'ble Court has issued directions to all the States/Union Territories for reconstitution of the Appellate Authority under the Acts referred to above with a judge in the rank of a High Court Judge or a Supreme Court Judge-sitting or retired-as it's Chairman alon with two others as members pending Govt. of India bringing in necessary amendments to the appeal provisions of the Water and the Air Acts,. When consulted the Registrar General, High Court of Karnataka in letter cited at (3) above has sent a penel of names of sitting/retired High Court Judges to be considered for appointment as Chairman, Appellate Authority Acting on the recommendation of the Hon'ble High Court, Govt has decided to appoint Mr. Justice A.M. Farooq, former Judge of Karnataka High Court as Chairman of the Appellate Authority. Hence the order.

**Government Order No. FEE 97 EPC 2006, Bangalore, Datedd: 23rd July 2008**

In terms of Section 28 of the Water (Prevention and Control of Pollution) Act, 1974 and under Section 31 of the (Prevention and Control of Pollution )Act, 1981, Govt hereby accords approval for the reconstitution of the Appellate Authority with Mr. Justice A.M. Farooq, Retd Judge of High Court of

Karnataka as Chairman, Appellate Authority. Mr. Justice A.M. Farooq shall hold office for a term of two years or of 67 years of age whichever is earlier. N Notification shall be issued to this effect separately.

The other terms and conditions of appointment shall be as specified below:

i) The Appellate Authority shall entertain Appeals u/s 28 and 31 respectively of the Water and Air Acts.

ii) The Chairman, Appellate Authority shall be entitled to the paid pay (inclusive of pension) of Rs. 26,000/- (Rs Twenty six thousand) per month.

iii) The Chairman, Appellate Authority shall be provided with office and residential telephone facility as per the existing Rules.

iv) The Chairman shall be provided with a vehicle for official conveyance.

v) The Chairman. Appellate Authority shall be entitled to a special allowance of Rs. 1000/- (Rs. One thousand) per month.

vi) The order of appointment of the Chairman, Appellate Authority shall be effective from the date of assumption of charge as Chairman, Appellate Authority

vii) The Authority shall function in the premises assigned to it i.e. 6th Floor P.U. Building M.G. Road, Bangalore-1

viii) The expenditure shall be met under the budget head 3435-60-800-0-06 (Environmental Jurisprudence)

This Order issues with the concurrence of the Finance Department vide Note No. FD/240/Expr-2/2008, dt 5-7-2008.

By Order and in the name of the Governor of Karnataka

P.R. 1109

**N.R. JAGANMATHA**
Under Secretary to Government
Forest, Ecology & Environment Department

**Sub :** Approval of Management Plan of M/s Mysore Paper Mills (MPM) Limited Captive Plantations on forest lands reg.

**Read :** 1. State Government Letter No. FEE 163 FAP 2007, dated:4.1.2008

2. Letter No. F © A /11.6./114/269/WP/KAR/2522 dated, 30-5-2008 of the Deputy Conservator of Forests ©, Ministry of Environment and Forests, Government of India, Regional Office, Bangalore.

**PREAMBLE:**

The State Government vide his letter dated 4.1.2008 read at (1) above has submitted the Management Plan for the period 2008-09 to 2014-2015 for Captive Pulpwood Palntations raised on forest land by M/s Mysore Paper Mills (MPM) Limited.

The Government of India, Ministry of Environment and Forests, Bangalore vide their letter dated 30-5-2008 read at (2) above has conveyed its approval to the Management Plan of M/s Mysore Paper Mills Limited for the period 2008-09 to 2014-2015 under section 2 of Forest (Conservation) Act, 1980, subject to the some conditions.

The proposal has been examined in detail and hence the order.

**Government Order No. FEE 110 FAP 2008, Bangalore, Dated:23rd July 2008**

In the circumstances explained in the preamble above, Government are pleased to accord approval to the approval to Management Plan of M/s Mysore Paper Mills Limited for the period 2008-09 to 2014-2015 under Section 2 of Forest (Conservation) Act, 1980, subject to the following conditions:

1 The above approval will be subject to various orders passed by the Hon'ble High Court of Karnataak in W.P.No. 14644/1988.

2 The felling of established growth of miscellaneous species will not taken up at the time of harvesting of plantations.

3 The planting of local miscellaneous species at least to the extent of 10% shall be taken up at the time of replanting/regeneration of areas. The percentage of laocal species specially in Western Ghat areas be raised in due course of time while harvesting plantations in subsequent rotations.

4 The felling trces in areas of having slope more than 25 and along the bank of river/nallah shall not be done.

5 The burning in foresrt area shall not be taken up after harvesting of plantation.

6 The ploughing of plantation areas should not be done by using bulldozer. The ploughing if need be may be done along the contour by using tractor only and adequate measures be taken to prevent accelerated soil erosion.

7 Inter cropping with agricultural crop or essential oil species shall not be taken up as per the stipulated condition in State Government Order dated 11.8.1980.

8 The sandal wood should be introduced in plantation areas as per condition No (2) in State Government Order dated 11.8.1980 and proper record of the same should be maintained.

9 The plantation of Pinus caribaea over forest area will be taken up on harvesting of Acacia plantation as proposed in Management Plan only after ascertaining that there is no soil degradation.

10 The construction of new roads/buildings will not be taken for the Management of Plantations.

11 It may be ensured that non-forestry activity is permitted /taken up in forest area in violation of provisions of Forest (Conservation) Act, 1980.

12 In case regeneration works in the area worked in a year are not taken up in the subsequent year then felling of trees in forest area shall not be undertaken unless facts are appraised to Central Government and concurrence obtained for taking up felling operation as per Management Plan prescriptions.

13 The instruction issued by Ilon'ble Supreme Court vide Orders dated 14.2.2000 and 22.9.2000 in W.P.No. 202/1995 shall meticulously be followed.

It is ensured that provisions of Forest (Conservation )Act, 1980 and guidelines issued there under are stricity followed while implementing Management Plan prescriptions. The Central Government reserves the right to review, modify or withdraw this approval if any of the conditions of approval are not implemented or amendment to plan is necessitated keeping in view of the provisions of Forest (Conservation) Act, 1980 guidelines issued there under or general instructions issued by Central Government for scientific management of forests.

By Order and in the name of the Governor of Karnataka

P.R. 1112

**H.M. MALLIKARJUNA SWAMY**

Under Secretary to Government

Forest, Ecology & Environment Department

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಇದನ್ನು ಸ್ಥಾಪಿಸುವ ಕುರಿತು.

**ಓದಲಾಗಿದೆ:** ಮಾನ್ಯ ಮುಖ್ಯ ಮಂತ್ರಿಯವರ 2008–09ನೇ ಸಾಲಿನ ಆಯವ್ಯಯ ಭಾಷಣ.

**ಪ್ರಸ್ತಾವನೆ:**

ಮಾನ್ಯ ಮುಖ್ಯ ಮಂತ್ರಿಯವರು, 2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಅನಿವಾಸಿ ಕನ್ನಡಿಗರ ವಿಶೇಷ ಘಟಕ (ಎನ್.ಆರ್.ಐ. ಸೆಲ್) ಸ್ಥಾಪನೆ ಮಾಡುವುದಾಗಿ ತಿಳಿಸಿರುತ್ತಾರೆ. ಈ ಘಟಕವನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ರೀತಿಯಲ್ಲಿ ಘೋಷಿಸಲಾಗಿದೆ (2008–09)ರ ಆಯವ್ಯಯ ಭಾಷಣದ ಪುಸ್ತಕದ ಪುಟ ಸಂಖ್ಯೆ 20) ಇದರ ವ್ಯಾಪ್ತಿಯನ್ನು ವಿಸ್ತಾರಗೊಳಿಸುವ ದೃಷ್ಟಿಯಿಂದ ಹಾಗೂ ಆಡಳಿತ ನಿರ್ವಹಣೆಯ ದೃಷ್ಟಿಯಿಂದ "ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ" ಎಂದು ಸ್ಥಾಪಿಸಲು ನಿರ್ಧರಿಸಿದೆ. ಹಾಗೂ ಈ ಸಮಿತಿಯನ್ನು ಮಾನ್ಯ ಮುಖ್ಯ ಮಂತ್ರಿಯವರ ನೇರ ನಿಯಂತ್ರಣಕ್ಕೆ ಒಳಪಡಿಸಬೇಕಾಗಿರುವುದರಿಂದ, ಇದನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸಲು ತೀರ್ಮಾನಿಸಲಾಗಿದೆ.

ಪ್ರಸ್ತುತ ಕೇಂದ್ರ ಸರ್ಕಾರ ಮತ್ತು ಇತರ ರಾಜ್ಯಗಳಲ್ಲಿ ಅನಿವಾಸಿ ಭಾರತೀಯರಿಗಾಗಿ ಇರುವ ವಿಭಾಗದ ಮಾದರಿಯಲ್ಲಿ ಕರ್ನಾಟಕ ಸರ್ಕಾರವು "ಅನಿವಾಸಿ ಭಾರತೀಯ ಸಮಿತಿ ಕರ್ನಾಟಕ" ಇದನ್ನು ಸ್ಥಾಪಿಸಲು ಉದ್ದೇಶಿದ್ದು, ಈ ಸಮಿತಿಯ ಮೂಲಕ ಈ ಕೆಳಕಂಡ ಕ್ಷೇತ್ರಗಳಲ್ಲಿ ಅನಿವಾಸಿ ಭಾರತೀಯರಿಗೆ ಒಂದು ವೇದಿಕೆಯನ್ನು ಒದಗಿಸಲು ಉದ್ದೇಶಿಸಿದೆ.

(1) ಹೊರದೇಶಗಳಲ್ಲಿ ನೆಲೆಸಿರುವ ಕರ್ನಾಟಕದ ಜನರ ಹಿತಾಸಕ್ತಿಗಳಿಗೆ ಪೂರಕವಾದ ಎಲ್ಲಾ ಚಟುವಟಿಕೆಗಳಿಗೆ ಪ್ರೋತ್ಸಾಹಿಸುವುದು;

(2) ಹೊರದೇಶಗಳಲ್ಲಿನ ಕರ್ನಾಟಕ ಜನರು ಕನ್ನಡ ಸಾಹಿತ್ಯ ಹಾಗೂ ಸಾಂಸ್ಕೃತಿ ಚಟಿವಟಿಕೆಗಳನ್ನು ಬೆಳೆಸಿಕೊಂಡು ಅಭಿವೃದ್ಧಿಗೊಳಿಸಿಕೊಳ್ಳುವ ನಿಟ್ಟಿನಲ್ಲಿ ಅವಕಾಶ ಕಲ್ಪಿಸಲು ಸಹಕರಿಸುವುದು;

(3) ಅನಿವಾಸಿ ಭಾರತೀಯರ ಸಹಕಾರದೊಂದಿಗೆ ರಾಜ್ಯದಲ್ಲಿನ ಐ.ಟಿ/ಬಿ.ಟಿ/ವಿಜ್ಞಾನ/ತಂತ್ರಜ್ಞಾನ ಮತ್ತು ಸಂಶೋಧನಾ ಕ್ಷೇತ್ರಗಳಲ್ಲಿ ಹೆಚ್ಚಿನ ಅಭಿವೃದ್ಧಿ ಸಾಧಿಸಲು ಅಗತ್ಯವಿರುವ ಕಾರ್ಯಕ್ರಮಗಳನ್ನು ರೂಪಿಸುವುದು ಮತ್ತು ಅನುಷ್ಠಾನಗೊಳಿಸುವುದು

(4) ಅನಿವಾಸಿ ಭಾರತೀಯರನ್ನು ರಾಜ್ಯದಲ್ಲಿನ ಶೈಕ್ಷಣಿಕ ಹಾಗೂ ಇನ್ನಿತರ ಕ್ಷೇತ್ರಗಳ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಭಾಗವಹಿಸುವಂತೆ ಪ್ರೋತ್ಸಾಹಿಸುವುದು:

(5) ಅನಿವಾಸಿ ಭಾರತೀಯರಿಂದ ರಾಜ್ಯದಲ್ಲಿನ ಕೈಗಾರಿಕೆಗಳಲ್ಲಿ ಮತ್ತು ಮೂಲಭೂತ ಸೌಕರ್ಯಗಳಲ್ಲಿ ಬಂಡವಾಳ ಹೂಡಿಕೆಯನ್ನು ಪ್ರೋತ್ಸಾಹಿಸುವುದು.

(6) ಅನಿವಾಸಿ ಭಾರತೀಯರನ್ನು ರಾಜ್ಯದ ಸಾಮಾಜಿಕ ಹಾಗೂ ಆರ್ಥಿಕ ಕ್ಷೇತ್ರಗಳ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಂತೆ ಪ್ರೋತ್ಸಾಹಿಸುವುದು:

(7) ಅನಿವಾಸಿ ಭಾರತೀಯರ ಕ್ಷೇಮಾಭಿವೃದ್ಧಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ಪ್ರೋತ್ಸಾಹಿಸುವುದು.

ಇದರ ಜೊತೆಗೆ ಅನಿವಾಸಿ ಭಾರತೀಯರಿಗೆ ವಿವಿಧ ಕ್ಷೇತ್ರಗಳಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ಭಾಗವಹಿಸಲು ಅನುವಾಗುವಂತೆ ಅವಕಾಶಗಳನ್ನು ಕಲ್ಪಿಸುವುದು ಅವಶ್ಯಕವಾಗಿದೆ.

ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಇದು ಹೆಚ್ಚು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಬೇಕಾಗಿರುವುದರಿಂದ, ಅದಕ್ಕೆ ಸ್ವಾಯತ್ತ ಸಂಸ್ಥೆಯ ಸ್ಥಾನಮಾನ ನೀಡಲಾಗುವುದು. ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ವಿವಿಧ ಇಲಾಖೆಗಳ ಮುಖ್ಯಸ್ಥರನ್ನೊಳಗೊಂಡಂತೆ ಹಾಗೂ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸಾಧನೆ ಮಾಡಿರುವ ವ್ಯಕ್ತಿಗಳನ್ನೊಳಗೊಂಡಂತೆ ಕಾರ್ಯಕಾರಿ ಸಮಿತಿಯನ್ನು ರಚಿಸಲು ಉದ್ದೇಶಿಸಲಾಗಿದೆ.

ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಇದು ಪ್ರಸಕ್ತ ಸಾಲಿನಿಂದಲೇ ಕಾರ್ಯನಿರ್ವಹಿಸಬೇಕಾಗಿರುವ ಅಗತ್ಯತೆಯನ್ನು ಪರಿಗಣಿಸಿ, ಮೇಲ್ಕಂಡ ಸಮಿತಿ ಸ್ಥಾಪನೆಗೆ ಸಂಬಂಧಿಸಿದಂತೆ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 68 ಶಿಸನೇ 2008, ಬೆಂಗಳೂರು, ದಿನಾಂಕ:5ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಸರ್ಕಾರವು " ಅನಿವಾಸಿ ಭಾರತೀಯ ಸಮಿತಿ ಕರ್ನಾಟಕ" ವನ್ನು ಪ್ರಸಕ್ತ ಸಾಲಿನಿಂದ ಸ್ಥಾಪಿಸಲು ಮಂಜೂರಾತಿ ನೀಡಿದೆ.

2. ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಇದು ಹೆಚ್ಚು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಅನುವಾಗುವಂತೆ, ಅದಕ್ಕೆ ಸ್ವಾಯತ್ತ ಸಂಸ್ಥೆಯ ಸ್ಥಾನಮಾನ ನೀಡಲಾಗಿದೆ. ಈ ಸಮಿತಿಯ ಕೇಂದ್ರಸ್ಥಾನವು ಬೆಂಗಳೂರು ನಗರದಲ್ಲಿರತಕ್ಕದ್ದು.

3. ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ "ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಇದು ಈ ಕೆಳಕಂಡ ಸದಸ್ಯರುಗಳನ್ನು ಒಳಗೊಂಡಿರತಕ್ಕದ್ದು:

| | | |
|---|---|---|
| 1 | ಮಾನ್ಯ ಮುಖ್ಯ ಮಂತ್ರಿಯವರು, ಕರ್ನಾಟಕ ಸರ್ಕಾರ | : ಅಧ್ಯಕ್ಷರು |
| 2 | ಮಾನ್ಯ ಮುಖ್ಯ ಮಂತ್ರಿಯವರಿಂದ ನೇಮಿಸಲ್ಪಡುವ ಕರ್ನಾಟಕ ವಿಧಾನ ಮಂಡಲದ ಓರ್ವ ಸದಸ್ಯರು | : ಉಪಾಧ್ಯಕ್ಷರು |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | : ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | : ಸದಸ್ಯರು |
| 5 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಐ.ಟಿ., ಬಿ.ಟಿ., ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ. | : ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಮೂಲಭೂತ ಸೌಲಭ್ಯ ಇಲಾಖೆ | : ಸದಸ್ಯರು |
| 7 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ | : ಸದಸ್ಯರು |
| 8 | ಸರ್ಕಾರದ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | : ಸದಸ್ಯರು |
| 9 | ಸರ್ಕಾರದ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ | : ಸದಸ್ಯರು |
| 10 | ಸರ್ಕಾರದಿಂದ ನಾಮನಿರ್ದೇಶಿತನಾದ ಅನಿವಾಸಿ ಭಾರತೀಯರ ಒಬ್ಬ ಪ್ರತಿನಿಧಿ | : ಸದಸ್ಯರು |
| 11 | ಸಾಹಿತ್ಯ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿನ ಪರಿಣಿತರಾದ ಸರ್ಕಾರದಿಂದ ನಾಮನಿರ್ದೇಶಿತನಾದ ಒಬ್ಬ ವ್ಯಕ್ತಿ | : ಸದಸ್ಯರು |
| 12 | ಐ.ಟಿ/ಬಿ.ಟಿ/ವಿಜ್ಞಾನ/ತಂತ್ರಜ್ಞಾನ ಕ್ಷೇತ್ರಗಳಲ್ಲಿನ ಪರಿಣಿತರಾದ ಸರ್ಕಾರದಿಂದ ನಾಮನಿರ್ದೇಶಿತನಾದ ಒಬ್ಬ ವ್ಯಕ್ತಿ | : ಸದಸ್ಯರು |
| 13 | ಆರ್ಥಿಕ ತಜ್ಞರಾದ ಸರ್ಕಾರದಿಂದ ನಾಮನಿರ್ದೇಶಿತನಾದ ಒಬ್ಬ ವ್ಯಕ್ತಿ | : ಸದಸ್ಯರು |
| 14 | ಸಾಮಾಜಿಕ ತಜ್ಞರಾದ ಸರ್ಕಾರದಿಂದ ನಾಮನಿರ್ದೇಶಿತನಾದ ಒಬ್ಬ ವ್ಯಕ್ತಿ | : ಸದಸ್ಯರು |
| 15 | ಆಡಳಿತ ತಜ್ಞರಾದ ಸರ್ಕಾರದಿಂದ ನಾಮನಿರ್ದೇಶಿತನಾದ ಒಬ್ಬ ವ್ಯಕ್ತಿ | : ಸದಸ್ಯರು |
| 16 | ಅನಿವಾಸಿ ಭಾರತೀಯ ಸಮಿತಿಯ ಕಾರ್ಯದರ್ಶಿ (ಗ್ರೂಪ್ 'ಎ' ಸೀನಿಯರ್ ಸ್ಕೇಲ್ ದರ್ಜೆಗೆ ಕಡಿಮೆ ಇಲ್ಲದ ಸರ್ಕಾರದಿಂದ ನೇಮಿಸಲ್ಪಟ್ಟ ಒಬ್ಬ ಅಧಿಕಾರಿ) | : ಸದಸ್ಯ ಕಾರ್ಯದರ್ಶಿ |

4. "ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ" ಇದರ ಕಾರ್ಯದರ್ಶಿ (ಸದಸ್ಯ ಕಾರ್ಯದರ್ಶಿ) ಯವರು ಸಮಿತಿಯ ನಿರ್ಣಯ/ಯೋಜನೆಗಳನ್ನು ಕಾರ್ಯರೂಪಕ್ಕೆ ತರುವ ಜವಾಬ್ದಾರಿ ಹೊಂದಿರುತ್ತಾರೆ.

5. ಈ ಸಮಿತಿಗೆ ಅವಶ್ಯವಿರುವ ಇತರೇ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಹುದ್ದೆಗಳ ಸೃಜನೆಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

6. ಈ ಸಮಿತಿಯನ್ನು ಕೆಳಕಂಡ ಧ್ಯೇಯೋದ್ದೇಶಗಳಿಗೆ ಸೃಜಿಸಲಾಗಿದೆ:

(1) ಹೊರದೇಶಗಳಲ್ಲಿ ನೆಲೆಸಿರುವ ಕರ್ನಾಟಕದ ಜನರ ಹಿತಾಸಕ್ತಿಗಳಿಗೆ ಪೂರಕವಾದ ಎಲ್ಲಾ ಚಟುವಟಿಕೆಗಳಿಗೆ ಪ್ರೋತ್ಸಾಹಿಸುವುದು;

(2) ಹೊರದೇಶಗಳಲ್ಲಿನ ಕರ್ನಾಟಕ ಜನರು ಕನ್ನಡ ಸಾಹಿತ್ಯ ಹಾಗೂ ಸಾಂಸ್ಕೃತಿಕ ಚಟಿವಟಿಕೆಗಳನ್ನು ಬೆಳೆಸಿಕೊಂಡು ಅಭಿವೃದ್ಧಿಗೊಳಿಸಿಕೊಳ್ಳುವ ನಿಟ್ಟಿನಲ್ಲಿ ಅವಕಾಶ ಕಲ್ಪಿಸಲು ಸಹಕರಿಸುವುದು;

(3) ಅನಿವಾಸಿ ಭಾರತೀಯರ ಸಹಕಾರದೊಂದಿಗೆ ರಾಜ್ಯದಲ್ಲಿನ ಐ.ಟಿ/ಬಿ.ಟಿ/ವಿಜ್ಞಾನ/ತಂತ್ರಜ್ಞಾನ ಮತ್ತು ಸಂಶೋಧನಾ ಕ್ಷೇತ್ರಗಳಲ್ಲಿ ಹೆಚ್ಚಿನ ಅಭಿವೃದ್ಧಿ ಸಾಧಿಸಲು ಅಗತ್ಯವಿರುವ ಕಾರ್ಯಕ್ರಮಗಳನ್ನು ರೂಪಿಸುವುದು ಮತ್ತು ಅನುಷ್ಠಾನಗೊಳಿಸುವುದು

(4) ಅನಿವಾಸಿ ಭಾರತೀಯರನ್ನು ರಾಜ್ಯದಲ್ಲಿನ ಶೈಕ್ಷಣಿಕ ಹಾಗೂ ಇನ್ನಿತರ ಕ್ಷೇತ್ರಗಳ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಭಾಗವಹಿಸುವಂತೆ ಪ್ರೋತ್ಸಾಹಿಸುವುದು:

(5) ಅನಿವಾಸಿ ಭಾರತೀಯರಿಂದ ರಾಜ್ಯದಲ್ಲಿನ ಕೈಗಾರಿಕೆಗಳಲ್ಲಿ ಮತ್ತು ಮೂಲಭೂತ ಸೌಕರ್ಯಗಳಲ್ಲಿ ಬಂಡವಾಳ ಹೂಡಿಕೆಯನ್ನು ಪ್ರೋತ್ಸಾಹಿಸುವುದು.

(6) ಅನಿವಾಸಿ ಭಾರತೀಯರನ್ನು ರಾಜ್ಯದ ಸಾಮಾಜಿಕ ಹಾಗೂ ಆರ್ಥಿಕ ಕ್ಷೇತ್ರಗಳ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವಂತೆ ಪ್ರೋತ್ಸಾಹಿಸುವುದು:

(7) ಅನಿವಾಸಿ ಭಾರತೀಯರ ಕ್ಷೇಮಾಭಿವೃದ್ಧಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ಪ್ರೋತ್ಸಾಹಿಸುವುದು.

7. ಈ ಸಮಿತಿಯು ರಾಜ್ಯ ಸರ್ಕಾರದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆಡಳಿತ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುವುದು. ಇದಕ್ಕೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರ (ವ್ಯವಹಾರ ಹಂಚಿಕೆ) ನಿಯಮಗಳು, 1977ಕ್ಕೆ ಸೂಕ್ತ ತಿದ್ದುಪಡಿ ತರಲಾಗುವುದು.

8. ಈ ಸಮಿತಿಯು ಸ್ವಾಯತ್ತ ಸಂಸ್ಥೆಯಾಗಿ ಕಾರ್ಯನಿರ್ವಹಿಸಬೇಕಾಗಿರುವುದರಿಂದ, ಸರ್ಕಾರದಿಂದ ವಾರ್ಷಿಕ ಅನುದಾನವನ್ನು ನೀಡಲಾಗುವುದು. ಅನುದಾನದ ವಿವರ ಕುರಿತಂತೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1201

**ಎಸ್. ತಿಪ್ಪೇಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ)

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಹುಬ್ಬಳ್ಳಿಯಲ್ಲಿ ಆರ್ಯಭಟ ಐಟಿ ಪಾರ್ಕ್ ಅಭಿವೃದ್ಧಿಗಾಗಿ–ಆದೇಶ

**ಓದಲಾಗಿದೆ:** 1. ದಿನಾಂಕ:17.7.2008ರಂದು ಮಾನ್ಯ ಮುಖ್ಯಮಂತ್ರಿಗಳಿಂದ ವಿಧಾನ ಮಂಡಲದಲ್ಲಿ ಮಂಡಿಸಲಾದ ಆಯವ್ಯಯ ಭಾಷಣದ ವರದಿ ಕಂಡಿಕೆ 125.

2. ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ, ಆಯುಕ್ತರ ಪತ್ರ ಸಂಖ್ಯೆ:ಎಚ್‌ಡಿ ಎಂ.ಸಿ:100:02/288:07 ದಿನಾಂಕ:18.8.2008.

3. ನಿರ್ದೇಶಕರು, ಮಾತಂ ಮತ್ತು ಜೈತಂ ನಿರ್ದೇಶನಾಲಯ, ಇವರ ಪತ್ರ ಸಂಖ್ಯೆ:ಮಾತಂನಿ/ಲೆಕ್ಕ–1/25/ಆರ್ಯಭಟ ಐಟಿ ಪಾರ್ಕ್/356/2008–09, ದಿನಾಂಕ:20–8–2008.

**ಪ್ರಸ್ತಾವನೆ:**

ಉಲ್ಲೇಖ (1)ರಲ್ಲಿ ಓದಲಾದಂತೆ, ಮಾನ್ಯ ಮುಖ್ಯಮಂತ್ರಿಗಳು, ದಿನಾಂಕ:7–7–2008ರಂದು ವಿಧಾನ ಮಂಡಲದಲ್ಲಿ ಮಂಡಿಸಿದ 2008–09ನೇ ಸಾಲಿನ ಮುಂಗಡ ಪತ್ರದಲ್ಲಿ ಹುಬ್ಬಳ್ಳಿಯಲ್ಲಿ ಆರ್ಯಭಟ ಅಭಿವೃದ್ಧಿ ಪಾರ್ಕ್ ಸ್ಥಾಪನೆಗೆ ರೂ. 2.00 ಕೋಟಿಗಳ ಅನುದಾನ ಬಿಡುಗಡೆ ಬಗ್ಗೆ ಘೋಷಿಸಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ, ಆಯುಕ್ತರ ಪತ್ರದಲ್ಲಿ ಹುಬ್ಬಳ್ಳಿಯಲ್ಲಿ ಆರ್ಯಭಟ ಪಾರ್ಕ್‌ನ ಅಭಿವೃದ್ಧಿಗಾಗಿ ರೂ. 389 ಲಕ್ಷಗಳ ಬಿಡುಗಡೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ನಿರ್ದೇಶಕರು, ಮಾತಂ ಮತ್ತು ಜೈತಂ ನಿರ್ದೇಶನಾಲಯ, 2008–09ನೇ ಸಾಲಿನ ಮುಂಗಡ ಪತ್ರದಲ್ಲಿ ಹುಬ್ಬಳ್ಳಿಯಲ್ಲಿ ಆರ್ಯಭಟ ಮಾಹಿತಿ ತಂತ್ರಜ್ಞಾನ ಪಾರ್ಕ್‌ನ ಅಭಿವೃದ್ಧಿಗಾಗಿ ರೂ. 2.00 (ಎರಡು ಕೋಟಿಗಳು ಮಾತ್ರ) ಗಳನ್ನು ಒದಗಿಸಲಾಗಿದೆ. ಅದರಂತೆ ಆರ್ಯಭಟ ಮಾಹಿತಿ ತಂತ್ರಜ್ಞಾನ ಉದ್ಯಾನವು ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಯ ಒಡೆತನದಲ್ಲಿರುವ 26 ಎಕರೆ ವಿಸ್ತೀಣದಲ್ಲಿ ಸ್ಥಾಪನೆಗೊಂಡಿದ್ದು, ಆರ್ಯಭಟ ಪಾರ್ಕ್‌ನ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಬೇಕಾಗಿರುತ್ತದೆ. ಈ ಸಂಬಂಧವಾಗಿ ಆಯುಕ್ತರು, ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ, ಇವರು ಒಟ್ಟು ರೂ. 389.00 ಲಕ್ಷಗಳಿಗೆ ವಿವರವಾದ ಅಂದಾಜು ಪಟ್ಟಿಯನ್ನು ಸಲ್ಲಿಸಿದ್ದು, ಪ್ರಸಕ್ತ ಸಾಲಿಗೆ ರೂ. 200.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ. ಆಯುಕ್ತರು ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಇದು ಒಂದು ಅಭಿವೃದ್ಧಿ ಕಾರ್ಯಕ್ರಮವಾಗಿದ್ದು ಇದನ್ನು ಹಂತ ಹಂತವಾಗಿ ಅಭಿವೃದ್ಧಿ ಪಡಿಸುವ ಅವಶ್ಯಕತೆಯಿರುವುದರಿಂದ 2008–09ನೇ ಆರ್ಥಿಕ ಸಾಲಿನಲ್ಲಿ ಮೊದಲನೆಯದಾಗಿ ರೂ. 2.00 ಕೋಟಿಗಳನ್ನು ಬಿಡುಗಡೆ ಮಾಡಲು ಹಾಗೂ ಬಾಕಿ ರೂ. 1.89.00 ಲಕ್ಷಗಳನ್ನು 2009–10ನೇ ಸಾಲಿನಲ್ಲಿ ಬಿಡುಗಡೆ ಮಾಡಲು ಕೋರಿರುತ್ತಾರೆ.

ನಿರ್ದೇಶಕರು, ಮಾತಂ ಮತ್ತು ಜೈತಂ ನಿರ್ದೇಶನಾಲಯ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಮಾತಂಇ 25 ಎಮ್.ಡಿ.ಎ. 2008, ಬೆಂಗಳೂರು, ದಿನಾಂಕ:6ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ ವತಿಯಿಂದ ಕೈಗೆತ್ತಿಕೊಳ್ಳುವ ಹುಬ್ಬಳ್ಳಿಯಲ್ಲಿ ಆರ್ಯಭಟ ಐಟಿ ಪಾರ್ಕ್‌ನ ಅಭಿವೃದ್ಧಿ ಯೋಜನೆಗೆ ರೂ. 2.00 ಕೋಟಿಗಳ ವೆಚ್ಚಕ್ಕೆ ಸೀಮಿತಗೊಳಿಸಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ. ಮತ್ತು ರೂ. 1.00 ಕೋಟಿಗಳನ್ನು (ಒಂದು ಕೋಟಿಗಳು ರೂಪಾಯಿಗಳು ಮಾತ್ರ) ಪ್ರಥಮ ಕಂತಾಗಿ ಹುಬ್ಬಳ್ಳಿ –ಧಾರವಾಡ ಮಹಾನಗರ ಪಾಲಿಕೆಗೆ ಹಂಚಿಕೆ ಮಾಡುವ ಸಲುವಾಗಿ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಬೆಂಗಳೂರು, ಇವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ, ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವಿತರಿಸತಕ್ಕದ್ದು.

1. ಈ ವೆಚ್ಚವನ್ನು ಯೋಜನಾ ಲೆಕ್ಕಶೀರ್ಷಿಕೆ 5465–01–190–1–12 ಹುಬ್ಬಳ್ಳಿ ಆರ್ಯಭಟ ಮಾಹಿತಿ ತಂತ್ರಜ್ಞಾನ ಪಾರ್ಕ್ (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

2. ಯೋಜನೆಗೆ ಆಯವ್ಯಯದಲ್ಲಿ ಒದಗಣೆ ಮಾಡಲಾದ ಮೊತ್ತಕ್ಕಿಂತ (ರೂ. 2.00 ಕೋಟಿಗಳು) ಹೆಚ್ಚಿನ ವೆಚ್ಚವಿದ್ದಲ್ಲಿ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಯು ತನ್ನ ಸ್ವಂತ ಮೂಲಗಳಿಂದ ಅಥವಾ ನಿಗದಿದಾರರಿಂದ ವಸೂಲಾದ ಅಭಿವೃದ್ಧಿ ಶುಲ್ಕದಿಂದ (development fee collection from the allottees) ಭರಿಸತಕ್ಕದ್ದು.

3. ಬಿಡುಗಡೆ ಮಾಡಲಾದ ಹಣವನ್ನು ಪೂರ್ಣವಾಗಿ ಸದುಪಯೋಗಪಡಿಸಿಕೊಂಡು ಉಪಯೋಗಿತಾ ಪ್ರಮಾಣ ಪತ್ರವನ್ನು ಹಾಗೂ ಲೆಕ್ಕ ಪರಿಶೋಧಕರಿಂದ ದೃಢೀಕರಿಸಲ್ಪಟ್ಟ ತನಿಖಾ ವರದಿಗಳನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ಉಳಿದ ರೂ. 1.00ಕೋಟಿ (ಒಂದು ಕೋಟಿಗಳು ಮಾತ್ರ) ಅನುದಾನವನ್ನು ಪ್ರಸ್ತುತ ಬಿಡುಗಡೆ ಮಾಡಲಾದ ರೂ. 1.00 ಕೋಟಿ ಅನುದಾನದ ಉಪಯೋಗಿತಾ ಪ್ರಮಾಣ ಪತ್ರವು ಸರ್ಕಾರಕ್ಕೆ ತಲುಪಿದ ನಂತರ ಬಿಡುಗಡೆ ಮಾಡಲಾಗುವುದು.

5. ಈಗ ಬಿಡುಗಡೆ ಮಾಡಿದ ಹಣವನ್ನು ಉದ್ದೇಶಿತ ಯೋಜನೆಗೆ ಮಾತ್ರ ಉಪಯೋಗಿಸತಕ್ಕದ್ದು, ಹಾಗೂ ಈ ಹಣವನ್ನು ಬೇರೆ ಯೋಜನೆಗೆ ಸರ್ಕಾರದ ಪೂರ್ವಾನುಮತಿ ಇಲ್ಲದ ವರ್ಗಾಯಿಸಬಾರದು.

6. ಉದ್ದೇಶಿತ ಕಾರ್ಯಕ್ರಮಕ್ಕೆ ಖರ್ಚಾಗದ ಬಾಬ್ತು ಅನುದಾನವನ್ನು ಉಳಿಸಿಕೊಂಡು, ಅದನ್ನು ಸರ್ಕಾರದ ಗಮನಕ್ಕೆ ತರದೆ ಇದ್ದಲ್ಲಿ ಸದರಿ ಮೊತ್ತಕ್ಕೆ ಸರಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಪಾವತಿಸತಕ್ಕದ್ದು.

7. ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನವನ್ನು ಉಳಿಸಿಕೊಂಡಲ್ಲಿ ಅಥವಾ ಖರ್ಚು ಮಾಡದೆ ಬ್ಯಾಂಕಿನಲ್ಲಿ ಠೇವಣಿ ಮಾಡಿದಲ್ಲಿ ಅದನ್ನು ಸರ್ಕಾರದ ಗಮನಕ್ಕೆ ತರದೆ ಇದ್ದದ್ದು ಕಂಡು ಬಂದಲ್ಲಿ ಸದರಿ ಮೊತ್ತಕ್ಕೆ ಬ್ಯಾಂಕುಗಳು ನೀಡುವ ಸರಳ ಬಡ್ಡಿಯೊಂದಿಗೆ ಸರ್ಕಾರಕ್ಕೆ ಪಾವತಿಸಿಕೊಳ್ಳಲು ಕ್ರಮ ಕೈಗೊಳ್ಳಲಾಗುವುದು.

8. ಉದ್ದೇಶಿತ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಲಾದಂತಹ ಅನುದಾನದ ಲೆಕ್ಕಪತ್ರಗಳನ್ನು ಮಂಜೂರು ಮಾಡುವ ಅಧಿಕಾರಿಯು ಸಮೀಕ್ಷೆಗಾಗಿ ಕೋರಿದಲ್ಲಿ ತಪ್ಪದೇ ಒದಗಿಸತಕ್ಕದ್ದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ:ಪಿಡಿ 8 ಎಫ್‌ಆರ್‌ಓ 2008, ದಿನಾಂಕ:28.8.2008ರಲ್ಲಿ ನೀಡಿರುವ ಸಹಮತಿ ಹಾಗೂ ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಆಇ 1184 ವೆಚ್ಚ–1/08 ದಿನಾಂಕ:6.9.2008ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1265

**ಎಮ್.ವಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದ ಪುನರ್‌ರಚಿಸಲಾಗಿರುವ ನಿರ್ದೇಶಕರ ಮಂಡಳಿಯ ನಿರ್ದೇಶಕರುಗಳಿಗೆ ಷೇರುಗಳನ್ನು ಮರುಹಂಚುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಲೋಇ 34 ಇಎಪಿ 2008, ದಿನಾಂಕ:28.6.2008

2. ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ:ಕರ ಅನಿನಿ/ವ್ಯ.ನಿ/0526/08–09 ದಿನಾಂಕ:10.6.2008.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1)ರಲ್ಲಿನ ಸರ್ಕಾರದ ಆದೇಶ ದಿನಾಂಕ:28.6.2008 ರಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯನ್ನು ಪುನರ್ ರಚಿಸಲಾಗಿದೆ.

ಓದಲಾಗಿರುವ (2)ರಲ್ಲಿನ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ ಪಉನರ್ ರಚಿಸಲಾಗುವ ನಿಗಮದ ನಿರ್ದೇಶಕರ ಮಂಡಳಿಯ ನಿರ್ದೇಶಕರುಗಳಿಗೆ ಷೇರುಗಳನ್ನು ಮರು ಹಂಚಿಕೆ ಮಾಡುವಂತೆ ಕೋರಿರುತ್ತಾರೆ. ಆದ್ದರಿಂದ ಕೆಳಕಂಡಂತೆ ಮಂಡಳಿಯ ನಿರ್ದೇಶಕರುಗಳಿಗೆ ಷೇರುಗಳನ್ನು ಮರುಹಂಚಿಕೆ ಮಾಡಲು ಪ್ರಸ್ತಾಪಿಸಲಾಗಿರುತ್ತದೆ.

| ಕ್ರ.ಸಂ | ಮಂಡಳಿಯ ನಿರ್ದೇಶಕರುಗಳ ಹೆಸರು | ಷೇರುಗಳ ಸಂಖ್ಯೆ |
|---|---|---|
| 1 | ಶ್ರೀ. ಉದಾಸಿ ಚನ್ನಬಸಪ್ಪ ಮಹಾಲಿಂಗಪ್ಪ,<br>ಸನ್ಮಾನ್ಯ ಲೋಕೋಪಯೋಗಿ ಇಲಾಖೆ ಸಚಿವರು | 1 |
| 2 | ಶ್ರೀ. ಆರ್.ಬಿ. ಅಗವಾನೆ, ಭಾ.ಆ.ಸೇ<br>ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ | 1 |
| 3 | ಶ್ರೀ. ಕೆ. ಜ್ಯೋತಿರಾಮಲಿಂಗಮ್, ಭಾ.ಆ.ಸೇ.,<br>ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ನಗರಾಭಿವೃದ್ಧಿ ಇಲಾಖೆ | 1 |
| 4 | ಶ್ರೀ. ವಿ.ಪಿ. ಬಳಿಗಾರ್ ಭಾ.ಆ.ಸೇ.,<br>ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು<br>ಮೂಲಭೂತ ಸೌಕರ್ಯ ಅಭಿವೃದ್ಧಿ ಇಲಾಖೆ | 1 |
| 5 | ಶ್ರೀ. ಡಿ. ವೆಂಕಟೇಶ್ವರರಾವ್, ಭಾ.ಆ.ಸೇ.,<br>ಪ್ರಧಾನ ಕಾರ್ಯದರ್ಶಿಗಳು,<br>ಸಾರ್ವಜನಿಕ ಉದ್ದಿಮೆಗಳ ಇಲಾಖೆ | 1 |
| 6 | ಶ್ರೀ ಟಿ. ಸುಕುಮಾರ್<br>ಸರ್ಕಾರದ ಕಾರ್ಯದರ್ಶಿಗಳು,<br>ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ | 1 |
| 7 | ಶ್ರೀ. ಅನಿಲ್ ಕುಮಾರ್ ಝಾ ಭಾ.ಆ.ಸೇ.,<br>ಸರ್ಕಾರದ ಕಾರ್ಯದರ್ಶಿಗಳು,<br>ಆರ್ಥಿಕ ಇಲಾಖೆ (ಸುಧಾರಣೆ ಮತ್ತು ಪಿಎಂಯು) | 1 |
| 8 | ಶ್ರೀ. ಬಿ. ಬಸವರಾಜು, ಭಾ.ಆ.ಸೇ,<br>ವ್ಯವಸ್ಥಾಪಕ ನಿರ್ದೇಶಕರು,<br>ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ | 2 |
| 9 | ಶ್ರೀ. ಪಿ. ಜಯಪಾಲ್,<br>ಪ್ರಾದೇಶಿಕ ಮುಖ್ಯಸ್ಥರು, ಹುಡ್ಕೋ | – |
| 10 | ಶ್ರೀ. ಸಿ.ಇ.ಜಿ. ಜಸ್ಟೋ, ನಿವೃತ್ತ ಪ್ರೊಫೆಸರ್ | 1 |
| 11 | ಶ್ರೀ. ನಾರಾಯಣಪ್ಪ, ನಿವೃತ್ತ ಅಧೀಕ್ಷಕ ಇಂಜಿನಿಯರ್ | – |

ಸರ್ಕಾರದಲ್ಲಿ ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಲೋಇ 34 ಇಎಪಿ 2008, ಬೆಂಗಳೂರು, ದಿನಾಂಕ:29ನೇ ಆಗಸ್ಟ್ 2008**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪುನರ್ ರಚಿಸಲಾದ ನಿರ್ದೇಶಕರ ಮಂಡಳಿಯ ನಿರ್ದೇಶಕರುಗಳಿಗೆ ಈ ಕೆಳಕಂಡಂತೆ ಷೇರುಗಳನ್ನು ಮರುಹಂಚಿಕೆ ಮಾಡಲಾಗಿದೆ.

| ಕ್ರ.ಸಂ | ಮಂಡಳಿಯ ನಿರ್ದೇಶಕರುಗಳ ಹೆಸರು | ಷೇರುಗಳ ಸಂಖ್ಯೆ |
|---|---|---|
| 1 | ಶ್ರೀ. ಉದಾಸಿ ಚನ್ನಬಸಪ್ಪ ಮಹಾಲಿಂಗಪ್ಪ, ಅಧ್ಯಕ್ಷರು,<br>ಸನ್ಮಾನ್ಯ ಲೋಕೋಪಯೋಗಿ ಇಲಾಖೆ ಸಚಿವರು | 1 |
| 2 | ಶ್ರೀ. ಆರ್.ಬಿ. ಅಗವಾನೆ, ಭಾ.ಆ.ಸೇ<br>ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ | 1 |
| 3 | ಶ್ರೀ. ಕೆ. ಜ್ಯೋತಿರಾಮಲಿಂಗಮ್, ಭಾ.ಆ.ಸೇ.,<br>ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ನಗರಾಭಿವೃದ್ಧಿ ಇಲಾಖೆ | 1 |

| | | |
|---|---|---|
| 4 | ಶ್ರೀ. ವಿ.ಪಿ. ಬಳಿಗಾರ್ ಭಾ.ಆ.ಸೇ.,<br>ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು<br>ಮೂಲಭೂತ ಸೌಕರ್ಯ ಅಭಿವೃದ್ಧಿ ಇಲಾಖೆ | 1 |
| 5 | ಶ್ರೀ. ಡಿ. ವೆಂಕಟೇಶ್ವರರಾವ್, ಭಾ.ಆ.ಸೇ.,<br>ಪ್ರಧಾನ ಕಾರ್ಯದರ್ಶಿಗಳು,<br>ಸಾರ್ವಜನಿಕ ಉದ್ದಿಮೆಗಳ ಇಲಾಖೆ | 1 |
| 6 | ಶ್ರೀ. ಟಿ. ಸುಕುಮಾರ್<br>ಸರ್ಕಾರದ ಕಾರ್ಯದರ್ಶಿಗಳು,<br>ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ | 1 |
| 7 | ಶ್ರೀ. ಅನಿಲ್ ಕುಮಾರ್ ಝಾ ಭಾ.ಆ.ಸೇ.,<br>ಸರ್ಕಾರದ ಕಾರ್ಯದರ್ಶಿಗಳು,<br>ಆರ್ಥಿಕ ಇಲಾಖೆ (ಸುಧಾರಣೆ ಮತ್ತು ಪಿಎಂಯು) | 1 |
| 8 | ಶ್ರೀ. ಬಿ. ಬಸವರಾಜು, ಭಾ.ಆ.ಸೇ,<br>ವ್ಯವಸ್ಥಾಪಕ ನಿರ್ದೇಶಕರು,<br>ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ | 2 |
| 9 | ಶ್ರೀ. ಪಿ. ಜಯಪಾಲ್,<br>ಪ್ರಾದೇಶಿಕ ಮುಖ್ಯಸ್ಥರು, ಹುಡ್ಕೋ | – |
| 10 | ಶ್ರೀ. ಸಿ.ಇ.ಜಿ. ಜಸ್ಟೋ, ನಿವೃತ್ತ ಪ್ರೊಫೆಸರ್ | 1 |
| 11 | ಶ್ರೀ. ನಾರಾಯಣಪ್ಪ, ನಿವೃತ್ತ ಅಧೀಕ್ಷಕ ಇಂಜಿನಿಯರ್ | – |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಲೋಇ/461/ಆಕೋ–1/2008 ದಿನಾಂಕ:25.8.2008ರಲ್ಲಿನ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1264

**ಎಂ. ದೇವಿಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ, ಬಂದರು ಹಾಗೂ

ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

## ಸಹಕಾರ ಸಚಿವಾಲಯ

**ವಿಷಯ:** ಶ್ರೀ ಭಾಗ್ಯಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಖಾನಾಪುರ ಇದರ ಆಡಳಿತಾಧಿಕಾರಿಗಳ ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಇ 234 ಸಸಕ 2005 ದಿನಾಂಕ:26.11.05

2. ಸರ್ಕಾರದ ಆದೇಶ ಸಂಖ್ಯೆ:ಸಇ 213 ಸಸಕ 2006 ದಿನಾಂಕ:28.5.07

3. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ: ಡಿಎಸ್‌ಕೆ:ಇಎಸ್ ಟಿಎಸ್:108:2007–08 ದಿನಾಂಕ:7.7.2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಸರ್ಕಾರದ ಆದೇಶದಲ್ಲಿ ಶ್ರೀ ಭಾಗ್ಯಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಖಾನಾಪುರ ಇದರ ಆಡಳಿತಾಧಿಕಾರಿಗಳ ಅವಧಿಯನ್ನು ದಿನಾಂಕ:3.6.2006ರವರೆಗೆ ವಿಸ್ತರಿಸಲಾಗಿತ್ತು. ತದನಂತರ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಭಾಗ್ಯಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಖಾನಾಪುರ ಇದರ ಆಡಳಿತಾಧಿಕಾರಿಗಳ ಅವಧಿಯನ್ನು ಪುನಃ ದಿನಾಂಕ:4.6.06 ರಿಂದ 30.6.2008 ರವರೆಗೆ ವಿಸ್ತರಿಸಲಾಗಿತ್ತು.

ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ರವರು ಮೇಲೆ ಓದಲಾದ (3)ರಲ್ಲಿನ ಪತ್ರದಲ್ಲಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿ, ಶ್ರೀ ಭಾಗ್ಯಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಖಾನಾಪುರ ಬೆಳಗಾಂ ಜಿಲ್ಲೆ, ಇದರ ಆಡಳಿತಾಧಿಕಾರಿಗಳ ಅವಧಿಯು ಪೂರ್ಣಗೊಂಡಿದ್ದು, ಕಾರ್ಖಾನೆಯ ಆರ್ಥಿಕ ಪರಿಸ್ಥಿತಿ ಸುಧಾರಿಸಿಲ್ಲವೆಂದು, ಕಾರ್ಖಾನೆಯು 2006–07 ನೇ ಸಾಲಿನಲ್ಲಿ ಕಬ್ಬು ನುರಿಸಿದ ಬಿಲ್ಲು ಹಾಗೂ ಕಟಾವು ಬಿಲ್ಲುಗಳನ್ನು ಪಾವತಿ

ಮಾಡಬೇಕಾಗಿದೆಯೆಂದು ಅಲ್ಲದೆ ಬ್ಯಾಂಕ್ ಮತ್ತು ಇತರೆ ಸಂಸ್ಥೆಗಳಿಂದ ಪಡೆದಿರುವ ಸಾಲ ಹಾಗೆಯೇ ಉಳಿದಿದೆಯೆಂದು, ಕಾರ್ಖಾನೆಯನ್ನು ಗುತ್ತಿಗೆ ನೀಡಲು ಈಗಾಗಲೇ ಟೆಂಡರ್‌ಗಳನ್ನು ಸಹ ಕರೆಯಲಾಗಿದ್ದು, ಈ ಅಂಶಗಳ ಹಿನ್ನಲೆಯಲ್ಲಿ ಆಡಳಿತಾಧಿಕಾರಿಗಳ ಅವಧಿಯನ್ನು ಪುನಃ 31.12.2008 ರವರೆಗೆ ವಿಸ್ತರಿಸುವಂತೆ ಕೋರಿರುತ್ತಾರೆ.

ಈ ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಶ್ರೀ ಭಾಗ್ಯಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಖಾನಾಪುರ ಇದರ ಆಡಳಿತಾಧಿಕಾರಿಗಳ ಅವಧಿಯನ್ನು ದಿನಾಂಕ:1–7–2008 ರಿಂದ 31–12–2008 ರವರೆಗೆ ವಿಸ್ತರಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂ: ಸಇ 280 ಎಸಸೇ 2008, ಬೆಂಗಳೂರು, ದಿನಾಂಕ:1ನೇ ಸೆಪ್ಟೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಭಾಗ್ಯಲಕ್ಷ್ಮಿ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಖಾನಾಪುರ ಇದರ ಆಡಳಿತಾಧಿಕಾರಿಗಳ ಅಧಿಕಾರಾವಧಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ:1–7–2008 ರಿಂದ 31–12–2008 ರವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1266

**ನಂಜುಂಡಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಮೈಸೂರು ತಾಲ್ಲೂಕು ಜಯಪುರ ಹೋಬಳಿ, ಉದ್ದೂರು ಗ್ರಾಮದ ಮೋಜಿಣಿ ಸಂಖ್ಯೆ 551/1ರ 03 ಎ 11 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ

**ಓದಲಾಗಿದೆ:** 1. ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ: ಮೈನಪ್ರಾ/:ನಯೋ: ಸಭೆ:ಹೆ.ವಿ :43:07–08 ದಿನಾಂಕ:4.4.2008.

2. ದಿ:21–6–08 ರಂದು ಕಡತ ಸಂಖ್ಯೆ:ನಯೋ (19):ಮೈನಪ್ರಾ:ಭೂಉಬ:ಉದ್ದೂರು:187:08–09 ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ತಾಲ್ಲೂಕು ಜಯಪುರ ಹೋಬಳಿ, ಉದ್ದೂರು ಗ್ರಾಮದ ಮೋಜಿಣಿ ಸಂಖ್ಯೆ:551/1ರ 03ಎ 11 ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಭೂ ಉಪಯೋಗ ಬದಲಾಯಿಸುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 445 ಮೈಅಪ್ರಾ 2008, ಬಎಂಗಳೂರು, ದಿನಾಂಕ:30ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ತಾಲ್ಲೂಕು ಜಯಪುರ ಹೋಬಳಿ, ಉದ್ದೂರು ಗ್ರಾಮದ ಮೋಜಿಣಿ ಸಂಖ್ಯೆ 551/1ರ 03ಎ 11ಗುಂಟೆ ಜಮೀನನ್ನು ವ್ಯವಸಾಯ ವಲಯದಿಂದ ವಸತಿ ಉದ್ದೇಶಕ್ಕೆ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆಗೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 18ರನ್ವಯ ಶಾಸನಬದ್ದ ಶುಲ್ಕವನ್ನು ಅರ್ಜಿದಾರರು ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.
2. ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು.
3. ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಸತಿ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.

4. ಮಾಸ್ಟರ್ ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.

5. ಪ್ರಸ್ತಾಪಿತ ಜಮೀನು ನೈಸರ್ಗಿಕವಾಗಿ ಹರಿಯುವ ನಾಲಾ ಅಥವಾ ಹಳ್ಳಕ್ಕೆ ಸಮೀಪವಿದ್ದಲ್ಲಿ ಅಥವಾ ಕೆರೆಗೆ ಸಮೀಪವಿದ್ದಲ್ಲಿ ಭೂ ಅಭಿವೃದ್ಧಿಪಡಿಸುವ ಮುನ್ನ ಪರಿಸರ ಮಾಲಿನ್ಯ ಇಲಾಖೆಯಿಂದ ನಿರಾಕ್ಷೇಪಣಾ ಪತ್ರ ಪಡೆದುಕೊಳ್ಳತಕ್ಕದ್ದು.

6. ಸದರಿ ಜಮೀನಿನಲ್ಲಿ ಮಳೆ ನೀರು ಸಂಗ್ರಹಣೆ ತೊಟ್ಟಿ (Rain water harvesting storage)) ವ್ಯವಸ್ಥೆಯನ್ನು ಅರ್ಜಿದಾರರೇ ರೂಪಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1267

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

## HEALTH AND FAMILY WELFARE SECRETARIAT

**Sub :** Authorising the Chief Finance Officer, KHSDRP to draw Rs. 75, 000/-or less at a time on AC Bill-reg.

**Read :** 1. Govt Order No. HFW/KHSDRP/Sect/1/2006 Bangalore, dt. 30.12.2006
2. Govt Order No. HFW/KHSDRP/Sect/GO-1/2007. dt. 31.7.2008

**PREAMBLE:**

In the Government Order read above, the World Bank assisted Karnataka Health System Development and Reeform Project has commenced. As the activities of the project are in full swing, it is considered necessary to issue authorisation to the Chieffinance Officer, KHSDRP to draw Rs. 75,000/- or less at a time on AC bill for meeting the emergent office expenditure of the officer for 2008-09.

Hence, the following order.

**Government Order No. HFW/KHSDRP/Sect/GO-1/2007 Bangalore, Dated: 4th September 2008**

Under the circumstances mentioned in the preamble, Government are pleased to authorise the Chief Finance Officer, Karnataka Health System Development and Reform Project to draw Rs. 75, 000/- (Rupees seventy-five thousand) only or less at a time on AC bill for meeting the emergent office expenditure during the year 2008-09.

The expenditure in this behalf shall be debited to the Budget Head ;;2210-06-800-0-84-051 (General Expenses)" during the year 2008-09

By Order and in the name of the Governor of Karnataka

P.R. 1268

**SUSHAMA GODBOLE**
Deputy Secretary to Government KHSDRP
Health and Family Welfare Department

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ನಾಗರಾಜ್‌ಶೆಟ್ಟಿ, ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ, ಇವರ ವಿರುದ್ಧದ ಆಪಾದನೆಯಿಂದ ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಉಪನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂ:Compt/Uplok/BD-1153/2004/DRE-1, ದಿನಾಂಕ:7–11–2007.
2. ಸರ್ಕಾರದ ಆದೇಶ ಸಂ;ಆರ್‌ಡಿ 40 ಎಡಿಇ 2007, ದಿನಾಂಕ:26–12–2007.
3. ಮಾನ್ಯ ಉಪಲೋಕಾಯುಕ್ತರು,ಕರ್ನಾಟಕ ಲೋಕಾಯುಕ್ತರು, ಬೆಂಗಳೂರು ಇವರ ಪತ್ರ ಸಂ:Lok/ARE-4/Enq-3/2008 ದಿನಾಂಕ:30.6.2008.

**ಪ್ರಸ್ತಾವನೆ:**

ಶ್ರೀ ನಾಗರಾಜ್‌ಶೆಟ್ಟಿ, ತಹಶೀಲ್ದಾರ್, ಕೊರಟಗೆರೆ ಇವರ ವಿರುದ್ಧ ದಿನಾಂಕ:20–8–2007ರಂದು ಫಿರ್ಯಾದುದಾರರಾದ ಶ್ರೀ ಹನುಮಂತರಾಯಪ್ಪ ಮತ್ತು ಶ್ರೀ ಎಸ್. ಗೊಲ್ಲಹಳ್ಳಿ ಗ್ರಾಮಸ್ಥರು ಇವರು ಕೊರಟಗೆರೆ ತಾಲ್ಲೂಕು, ಕೋಳಾಲ

ಹೋಬಳಿ, ಎಸ್ ಗೊಲ್ಲಹಳ್ಳಿ ಗ್ರಾಮದ ಸರ್ವೆ ನಂ:32/45,46,37ರ ಗೋಮಾಳ/ಅರಣ್ಯ ಜಮೀನಿನಲ್ಲಿ ಸ್ವಾಧೀನ ಇರುವ ವ್ಯಕ್ತಿಗಳನ್ನು ಖುಲ್ಲಾಪಡಿಸಲು (ಉಚ್ಚ ನ್ಯಾಯಾಲಯದ ನಿರ್ದೇಶನದ ಅನ್ವಯ) ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು ಮತ್ತು ಇತರರು ಕ್ರಮ ತೆಗೆದುಕೊಂಡಿಲ್ಲವೆಂದು ಮಾನ್ಯ ಕರ್ನಾಟಕ ಲೋಕಾಯುಕ್ತರು, ಬೆಂಗಳೂರು ಇವರಿಗೆ ದೂರನ್ನು ಸಲ್ಲಿಸಿರುತ್ತಾರೆ. ಸದರಿ ದೂರನ್ನು ಪರಿಶೀಲಿಸಿ ಉಪನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಮಾನ್ಯ ಉಪಲೋಕಾಯುಕ್ತರು ದಿನಾಂಕ:6.11.2007ರ ವರದಿ ಮತ್ತು ಸಂಬಂಧಿಸಿದ ದಾಖಲಾತಿಗಳನ್ನು ಸರ್ಕಾರಕ್ಕೆ ಕಳುಹಿಸಿಕೊಡುತ್ತಾ ಕರ್ನಾಟಕ ಲೋಕಾಯುಕ್ತ ಅಧಿನಿಯಮ ಕಲಂ 7(2)ರನ್ವಯ ಪ್ರಾರಂಭಿಕ ತನಿಖೆಯನ್ನು ನಡೆಸಿ ಸದರಿ ಅಧಿನಿಯಮ ಕಲಂ 12(3)ರನ್ವಯ ಇಲಾಖಾ ವಿಚಾರಣೆ ಜರುಗಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 14(ಎ)ರನ್ವಯ ಮೇಲೆ ಓದಲಾದ ಕ್ರ.ಸಂ (2), ದಿನಾಂಕ:26.12.2007ರಲ್ಲಿ ಇಲಾಖಾ ವಿಚಾರಣೆ ನಡೆಸಲು ಮಾನ್ಯ ಉಪಲೋಕಾಯುಕ್ತರಿಗೆ ವಹಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ (3) ದಿನಾಂಕ:30–6–2008ರನ್ವಯ ಮಾನ್ಯ ಉಪಲೋಕಾಯುಕ್ತರು ಶ್ರೀ ನಾಗರಾಜಶೆಟ್ಟಿ ತಹಶೀಲ್ದಾರ್ ಕೊರಟಗೆರೆ ಇವರ ವಿರುದ್ಧ ಭೂ ಒತ್ತುವರಿ ಮಾಡಿದವರ ವಿರುದ್ಧ ಕ್ರಮ ಕೈಗೊಳ್ಳದಿರುವ ದೂರಿನ ಬಗ್ಗೆ ವಿಚಾರಣೆ ನಡೆದು ವಿಚಾರಣಾ ವರದಿಯಲ್ಲಿ ಆಪಾದಿತ ಅಧಿಕಾರಿಯವರ ಮಾಹಿತಿ ತಿಳಿದ ತಕ್ಷಣ ಜಮೀನಿನ ಸರ್ವೇ ಮಾಡಿಸಿ ಮುಂದಿನ ಕ್ರಮ ತೆಗೆದುಕೊಂಡಿರುವುದಾಗಿ ಆದ್ದರಿಂದ ಆಪಾದಿತ ಅಧಿಕಾರಿಯವರ ಯಾವುದೇ ನಿರ್ದೇಶನ ಉಲ್ಲಂಘನೆಯಾಗಿರುವುದಿಲ್ಲ. ಸದರಿಯವರ ವಿರುದ್ಧ ಆಪಾದನೆಗಳು ಸಾಬೀತಾಗಿಲ್ಲವೆಂದು ವರದಿ ಮಾಡಿರುತ್ತಾರೆ. ಆದ್ದರಿಂದ ಮಾನ್ಯ ಉಪಲೋಕಾಯುಕ್ತರ ವಿಚಾರಣಾ ವರದಿಯನ್ನು ಸರ್ಕಾರವು ಒಪ್ಪಿ ಆಪಾದಿತ ಅಧಿಕಾರಿಯಾದ ಶ್ರೀ ನಾಗರಾಜ್ ಶೆಟ್ಟಿ, ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು ಇವರ ವಿರುದ್ಧದ ಆಪಾದನೆಯಿಂದ ದೋಷಮುಕ್ತಗೊಳಿಸಲು ನಿರ್ಧರಿಸಿರುವುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂ:ಆರ್‌ಡಿ 40 ಎಡಿಇ 2007, ಬೆಂಗಳೂರು, ದಿನಾಂಕ:30ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ನಾಗರಾಜ್‌ಶೆಟ್ಟಿ ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆ ಕುರಿತು ಮಾನ್ಯ ಉಪಲೋಕಾಯುಕ್ತರು ಸಲ್ಲಿಸಿರುವ ವಿಚಾರಣಾ ವರದಿಯನ್ನು ಸರ್ಕಾರವು ಒಪ್ಪಿ ಶ್ರೀ ನಾಗರಾಜ್‌ಶೆಟ್ಟಿ, ತಹಶೀಲ್ದಾರ್, ಕೊರಟಗೆರೆ ತಾಲ್ಲೂಕು ಇವರ ವಿರುದ್ಧದ ಆರೋಪದಿಂದ ಮುಕ್ತಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1269

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿ ಕಾವೇರಿ ಜಲ ವಿವಾದಕ್ಕೆ ಸಂಬಂಧಿಸಿದಂತೆ ಸೃಜಿಸಲಾದ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 52 ಸಸಿವಿ 95, ದಿನಾಂಕ:8.8.2005.
2. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 61 ಸಸಿವಿ 2006, ದಿನಾಂಕ:21–8–2006.
3. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 43 ಸಸಿವಿ 2007 ದಿನಾಂಕ:31.8.2007.
4. ಸರ್ಕಾರದ ಅಪರ ಕಾರ್ಯದರ್ಶಿ (ಅಂತರರಾಜ್ಯ ಜಲ ವಿವಾದ), ಕಾನೂನು, ನ್ಯಾಯ ಮತ್ತು ಮಾನ ಹಕ್ಕುಗಳ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಲಾ 12 ಕಾಜವಿ 2008, ದಿನಾಂಕ: 10–7–2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:8.8.2005ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿ ಕಾವೇರಿ ಜಲ ವಿವಾದಕ್ಕೆ ಸಂಬಂಧಿಸಿದಂತೆ ಸೃಜಿಸಲಾದ ಈ ಕೆಳಕಂಡ ಹುದ್ದೆಗಳನ್ನು ಮೇಲೆ (2) ಮತ್ತು (3)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಕಾಲಕಾಲಕ್ಕೆ ಮುಂದುವರಿಸುತ್ತಾ ಬರಲಾಗಿದೆ.

| | | |
|---|---|---|
| 1 | ಅಪರ ಕಾರ್ಯದರ್ಶಿ | 1 ಹುದ್ದೆ |
| 2 | ಉಪ ಕಾರ್ಯದರ್ಶಿ | 1 ಹುದ್ದೆ |

| | | |
|---|---|---|
| 3 | ಶಾಖಾಧಿಕಾರಿ | 1 ಹುದ್ದೆ |
| 4 | ಹಿರಿಯ ಸಹಾಯಕರು | 2 ಹುದ್ದೆಗಳು |
| 5 | ಶೀಘ್ರಲಿಪಿಗಾರರು | 2 ಹುದ್ದೆಗಳು |
| 6 | ಬೆರಳಚ್ಚುಗಾರರು | 2 ಹುದ್ದೆಗಳು |
| 7 | ದಲಾಯತ್ | 1 ಹುದ್ದೆ |
| 8 | ಅಡ್ವೋಕೇಟ್ ಜನರಲ್ ರವರ ಆಪ್ತ ಸಿಬ್ಬಂದಿ ಶಾಖೆಗೆ ಸೃಜಿಸಲಾಗಿರುವ ಶೀಘ್ರಲಿಪಿಗಾರರ ಹುದ್ದೆ | 1 ಹುದ್ದೆ |
| | ಒಟ್ಟು | 11 ಹುದ್ದೆಗಳು |

ಮೇಲ್ಕಂಡ ಹುದ್ದೆಗಳ ಮುಂದುವರಿಕೆಯು ದಿನಾಂಕ:28.8.2008ಕ್ಕೆ ಮುಕ್ತಾಯಗೊಂಡಿದ್ದರಿಂದ ಈ ಹುದ್ದೆಗಳನ್ನು ದಿನಾಂಕ:29.8.2008ರಿಂದ ಒಂದು ವರ್ಷದ ಅವಧಿಗೆ ಅಥವಾ ಕಾವೇರಿ/ಕೃಷ್ಣಾ ಜಲ ವಿಭಾಗದ ನ್ಯಾಯಾಧೀಕರಣವು ಮುಕ್ತಾಯಗೊಳ್ಳುವವರೆಗೆ ಹಾಗೂ ಮಹಾದಾಯಿ ವಿಷಯವು ಇತ್ಯರ್ಥವಾಗುವವರೆಗೆ ಇವರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ತಾತ್ಕಾಲಿಕವಾಗಿ ಮುಂದುವರಿಸುವಂತೆ ಮೇಲೆ (4)ರಲ್ಲಿ ಓದಲಾದ ದಿನಾಂಕ:10–7–2008ರ ಅನಧಿಕೃತ ಟಿಪ್ಪಣಿಯಲ್ಲಿ ಸದರಿ ಇಲಾಖೆಯು ಕೋರಿದೆ. ಅದರಂತೆ ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 661 ಸಾಸೇ 2008, ಬೆಂಗಳೂರು, ದಿನಾಂಕ:19ನೇ ಆಗಸ್ಟ್ 2008**

ಕರ್ನಾಟಕ ಸರ್ಕಾರ ಸಚಿವಾಲಯದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿ ಕಾವೇರಿ ಜಲ ವಿವಾದಕ್ಕೆ ಸಂಬಂಧಿಸಿದಂತೆ ಸೃಜಿಸಲಾದ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ:29.8.2008 ರಿಂದ ಒಂದು ವರ್ಷದ ಅವಧಿಗೆ ಅಥವಾ ಕಾವೇರಿ/ಕೃಷ್ಣಾ ಜಲ ವಿವಾದದ ನ್ಯಾಯಾಧೀಕರಣವು ಮುಕ್ತಾಯಗೊಳ್ಳುವವರೆಗೆ ಹಾಗೂ ಮಹಾದಾಯಿ ವಿಷಯವು ಇತ್ಯರ್ಥವಾಗುವವರೆಗೆ ಇದರಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ತಾತ್ಕಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| | | |
|---|---|---|
| 1 | ಅಪರ ಕಾರ್ಯದರ್ಶಿ | 1 ಹುದ್ದೆ |
| 2 | ಉಪ ಕಾರ್ಯದರ್ಶಿ | 1ಹುದ್ದೆ |
| 3 | ಶಾಖಾಧಿಕಾರಿ | 1 ಹುದ್ದೆ |
| 4 | ಹಿರಿಯ ಸಹಾಯಕರು | 2 ಹುದ್ದೆಗಳು |
| 5 | ಶೀಘ್ರಲಿಪಿಗಾರರು | 2 ಹುದ್ದೆಗಳು |
| 6 | ಬೆರಳಚ್ಚುಗಾರರು | 2 ಹುದ್ದೆಗಳು |
| 7 | ದಲಾಯತ್ | 1 ಹುದ್ದೆ |
| 8 | ಅಡ್ವೋಕೇಟ್ ಜನರಲ್ ರವರ ಆಪ್ತ ಸಿಬ್ಬಂದಿ ಶಾಖೆಗೆ ಸೃಜಿಸಲಾಗಿರುವ ಶೀಘ್ರಲಿಪಿಗಾರರ ಹುದ್ದೆ | 1 ಹುದ್ದೆ |
| | ಒಟ್ಟು | 11 ಹುದ್ದೆಗಳು |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್ ಡಿ 1 ಟಿಎಫ್‌ಪಿ 96, ದಿನಾಂಕ:10–7–1996ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1252

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ವಿಷಯ:** ಶ್ರೀ ಎ.ಎಂ. ಗೌಣಿ ಕೆ.ಎ.ಎಸ್ (ನಿವೃತ್ತ) ಅಧಿಕಾರಿ ಇವರ ವಿರುದ್ಧ ಇಲಾಖಾ ವಿಚಾರಣೆ–ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ನೋಟೀಸ್ ಸಂ:ಸಿಆಸುಇ 18 ಎಸ್ ಇಎನ್ 04 ದಿ:24.6.05.

2. ಶ್ರೀ ಎ.ಎಂ. ಗೌಣಿ ಕೆ.ಎ.ಎಸ್ (ನಿವೃತ್ತ) ಅಧಿಕಾರಿ ರವರ ಲಿಖಿತ ಹೇಳಿಕೆ ದಿ:25.7.05 ಮತ್ತು 17.5.06.

3. ಸರ್ಕಾರ ಆದೇಶ ಸಂ:ಸಿಆಸುಇ 18 ಎಸ್ ಇಎನ್ 04 ದಿ:21.5.2007.

4. ಶ್ರೀ ಡಬ್ಲ್ಯೂ ಅನ್ಸಾರಿ, ನಿವೃತ್ತ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರು ಇವರ ವಿಚಾರಣಾ ವರದಿ ದಿನಾಂಕ:27.10.07

**ಪ್ರಸ್ತಾವನೆ:**

ಶ್ರೀ ಎ.ಎಂ. ಗೌಣಿ ಕೆ.ಎ.ಎಸ್ (ನಿವೃತ್ತ) ಅಧಿಕಾರಿ ಇವರು ಅಲಮಟ್ಟಿ ಕೃಷ್ಣಾ ಮೇಲ್ದಂಡೆ ಯೋಜನೆಯ ವಿಶೇಷ ಭೂಸ್ವಾಧೀನಾಧಿಕಾರಿಗಳ ಕಛೇರಿಯಲ್ಲಿ ವಿಶೇಷ ಭೂಸ್ವಾಧಿನಾಧೀಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಕೃಷ್ಣಾ ಮೇಲ್ದಂಡೆ ಯೋಜನೆಗಾಗಿ 5.12/515 ಮೀ. ಸೀಮಾ ರೇಖೇಯಲ್ಲಿ ಸ್ವಾಧೀನಪಡಿಸಿಕೊಳ್ಳಲು ಬಿಜಾಪುರ ತಾಲ್ಲೂಕಿನ ಜೈನಾಪುರ ಗ್ರಾಮದ ರಿ.ಸ.ನಂ 58/1 ಕ್ಷೇತ್ರ 2.00 ಎಕರೆ 58/2 ಕ್ಷೇತ್ರ 2.00 ಎಕರೆ 58/3 ಕ್ಷೇತ್ರ 4.00 ಎಕರೆ 58/4 ಕ್ಷೇತ್ರ 4.00 ಎಕರೆ 58/5 ಕ್ಷೇತ್ರ 7.27 ಎಕರೆ, 27/3 ಕ್ಷೇತ್ರ 3.07 ಎಕರೆ ಹಾಗೂ 26/3 ಕ್ಷೇತ್ರ 0.07 ರ ಜಮೀನುಗಳ ಖುಷ್ಕಿ ಜಮೀನುಗಳಾಗಿದ್ದರೂ ದುರುದ್ದೇಶಪೂರ್ವಕವಾಗಿ ಸದರಿ ಜಮೀನುಗಳನ್ನು ನೀರಾವರಿ ಜಮೀನಗಳೆಂದು ಪರಿಗಣಿಸಿ ಹೆಚ್ಚುವರಿ ಭೂಪರಿಹಾರ ಧನ ಪಾವತಿ ಮಾಡುವ ಉದ್ದೇಶದಿಂದ ಕರಡು ಐತೀರ್ಪು ರಚಿಸಿ ಕರ್ತವ್ಯಲೋಪ ಎಸಗಿರುವ ಆರೋಪಗಳ ಕುರಿತು ವಿಚಾರಣೆ ನಡೆಸಲು ಮೇಲೆ ಕ್ರಮ ಸಂ(1)ರಲ್ಲಿ ಓದಲಾದ ನೋಟಿಸಿನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆ ಪ್ರಾರಂಭಿಸಲಾಯಿತು. ಮೇಲೆ ಓದಲಾದ ಕ್ರಮ ಸಂಖ್ಯೆ (2)ರಂತೆ ಆಪಾದಿತ ಅಧಿಕಾರಿಯು ನೋಟಿಸ್‌ಗೆ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದುದರಿಂದ ಸದರಿಯವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಮೇಲೆ ಕ್ರಮ ಸಂ(3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಡಬ್ಲ್ಯೂ ಅನ್ಸಾರಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ಮೇಲೆ ಕ್ರಮ ಸಂ(4)ರಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ, ಈ ಹಿಂದೆ ಸದರಿ ಕಛೇರಿಯಲ್ಲಿ ಕಾರ್ಯನಿರ್ವಹಿಸಿದ ಅಧಿಕಾರಿ ತಯಾರಿಸಿದ ಅವಾರ್ಡ್‌ಗೆ ಆಪಾದಿತರು ಸಹಿ ಹಾಕಿರುವುದಿಲ್ಲವೆಂದು ಹಾಗೂ ಹಿಂದಿನ ಭೂಸ್ವಾಧೀನಾಧಿಕಾರಿಗಳು ತಯಾರಿಸಿದ ಅವಾರ್ಡ್‌ನ ಮೊತ್ತವನ್ನು ಆರೋಪಿತ ಅಧಿಕಾರಿಗಳು ತನಿಖೆ ನಂತರ ಪರಿಷ್ಕರಿಸಿರುವುದರಿಂದ ಪರಿಹಾರಧನವು ಇನ್ನೂ ಕಡಿಮೆಯಾಗಿರುವ ಕಾರಣ ಇದರಿಂದಾಗಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟವಾಗದ ಕಾರಣ ಸದರಿ ಅಧಿಕಾರಿಯ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ಸರ್ಕಾರವು ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಎ.ಎಂ. ಗೌಣಿ ಕೆ.ಎ.ಎಸ್ (ನಿವೃತ್ತ) ಅಧಿಕಾರಿ ಇವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಆರೋಪಿತ ಅಧಿಕಾರಿಯನ್ನು ಆರೋಪಗಳಿಂದ ಮುಕ್ತರನ್ನಾಗಿಸಲು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 18 ಎಸ್ ಇಎನ್ 2004 (ಸಿಆಸುಇ 107 ಕೆಇವಿ 07), ಬೆಂಗಳೂರು, ದಿನಾಂಕ:23ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ಎ.ಎಂ. ಗೌಣಿ ಕೆ.ಎ.ಎಸ್ (ನಿವೃತ್ತ) ಅಧಿಕಾರಿ ಅವರನ್ನು ದಿ:24.6.2005ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1270

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ಗುಲ್ಬರ್ಗಾ ಜಿಲ್ಲೆ ಶೋರಾಪುರ ತಾಲ್ಲೂಕಿಗೆ ಹೆಚ್ಚುವರಿ ನೋಟರಿ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ.ಲಾ 158 ಎಲ್‌ಸಿಎಲ್ 06, ದಿನಾಂಕ:11.5.2007.
2. ಸರ್ಕಾರಿ ಪತ್ರ ಸಂಖ್ಯೆ ಲಾ 158 ಎಲ್‌ಸಿಎಲ್ 06 ದಿನಾಂಕ:7.6.2007.
3. ಪತ್ರ ಸಂಖ್ಯೆ:ಡಿಸಿಜಿ/ಎಡಿಎಂಎನ್/1924/2007 ದಿನಾಂಕ:24.10.2007.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:11.5.07ರ ಸರ್ಕಾರಿ ಆದೇಶದಲ್ಲಿ ಶೋರಾಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆಗೆ ನೋಟರಿ ಹುದ್ದೆಯನ್ನು ಹೆಚ್ಚುವರಿಯಾಗಿ ಸೃಜಿಸಲಾಗಿತ್ತು. ಸದರಿ ಹುದ್ದೆ ಭರ್ತಿ ಮಾಡಲು ನೋಟರಿ ನಿಯಮಾನುಸಾರ ಪ್ರಸ್ತಾವನೆ ಸಲ್ಲಿಸುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ:7–6–07ರ ಸರ್ಕಾರಿ ಪತ್ರದಲ್ಲಿ ಕೋರಲಾಗಿತ್ತು. ಆ ಮೇರೆಗೆ

ಮೇಲೆ (3)ರಲ್ಲಿ ಓದಲಾದ ದಿನಾಂಕ:24.10.07ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಇವರು 10 ಮನವಿಗಳನ್ನೊಳಗೊಂಡ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 220 ಎಲ್‌ಸಿಎಲ್ 2007, ಬೆಂಗಳೂರು, ದಿನಾಂಕ:1ನೇ ಸೆಪ್ಟೆಂಬರ್ 2008**

ನೋಟರಿ ಅಧಿನಿಯಮ (1952) ಹಾಗೂ ಅದರಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ, ನೋಟರಿ ನಿಯಮಾವಳಿಗಳು (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ಶ್ರೀ ಅಪ್ಪಾಸಾಹೇಬ ಪಾಟೀಲ್, ವಕೀಲರು, ಬಿನ್ ಮಹಂತಗೌಡ ಪಾಟೀಲ್, ಉದ್ದಾರ್ ರಸ್ತೆ, (ಶೋರಾಪುರ ಟೌನ್), ಶೋರಾಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಶೋರಾಪುರ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ 501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತಗಳಿಗೆ (0070–01–501–0–06) ನೋಟರಿ ನಿಯಮಾನುಸಾರ ನಿಗಧಿಪಡಿಸಲಾದ ರೂ. 1000/– (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1271

**ಶಕುಂತಲ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ
(ಆಡಳಿತ–2)

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** 2007–08ನೇ ಸಾಲಿನಲ್ಲಿ ಕಬ್ಬು ಬೆಳೆದ ರೈತರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಿಐ 19 ಎಸ್‌ಜಿಎಫ್ 2008 (ಭಾ–2) ದಿನಾಂಕ:12.3.2008.
2. ಸರ್ಕಾರದ ಆದೇಶ ಸಂಖ್ಯೆ:ಸಿಐ 19 ಎಸ್‌ಜಿಎಫ್ 2008(ಭಾ–2) ದಿನಾಂಕ:13.6.2008.
3. ಆಯುಕ್ತರು ಕಬ್ಬು ಅಭಿವೃದ್ಧಿರವರ ಪತ್ರ ಸಂಖ್ಯೆ:ಡಿಎಸ್‌ಕೆ:ಎಸ್‌ಟಿಟಿ :13–2:2007–08, ದಿನಾಂಕ:13.6.2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು 2007–08ನೇ ಸಾಲಿನ ಹಂಗಾಮಿನಲ್ಲಿ ದಿನಾಂಕ:31.3.2008ರ ಅಂತ್ಯಕ್ಕೆ 12 ತಿಂಗಳು ಮೀರಿ ಪಕ್ವವಾದ ಎಲ್ಲಾ ಕಬ್ಬನ್ನು ನುರಿಸಬೇಕೆಂಬ ಹಿನ್ನಲೆಯಲ್ಲಿ ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಕೆಲವು ವಿನಾಯಿತಿ ಮತ್ತು ಸಹಾಯಧನ ಸೌಲಭ್ಯವನ್ನು ನೀಡಲಾಗುವುದೆಂದು ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (2)ರಲ್ಲಿರುವ ಸರ್ಕಾರದ ಆದೇಶದಲ್ಲಿ ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಎಂ.ಕೆ. ಹುಬ್ಬಳ್ಳಿ, ಈ ಕಾರ್ಖಾನೆಗೆ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಪ್ರತಿ ಟನ್ ಕಬ್ಬಿಗೆ ರೂ. 100.00ಗಳ ಸಹಾಯಧನ/ಸಾಗಾಣಿಕೆ ಸಹಾಯಧನ ಮತ್ತು ರಫ್ತು ಮಾಡಲಾದ ಸಕ್ಕರೆಗೆ ರಫ್ತು ಸಹಾಯಧನ ನೀಡುವ ಸಲುವಾಗಿ ಮೊದಲ ಕಂತು 2.00ಕೋಟಿ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (3)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರವರ ಪತ್ರದಲ್ಲಿ ಮೆ:ಮೈಸೂರು ಪೇಪರ್ ಮಿಲ್ಸ್ (ಲಿ) ಸಕ್ಕರೆ ಕಾರ್ಖಾನೆ ಭದ್ರಾವತಿ ಈ ಕಾರ್ಖಾನೆಯು ವಿಸ್ತರಿಸಿದ ಅವಧಿ ದಿನಾಂಕ:1.4.2008ರಿಂದ 29.5.2008ರವರೆಗೆ ನುರಿಸಿದ ಪ್ರತಿ ಟನ್ ಕಬ್ಬಿಗೆ ರೂ. 100.00ಗಳ ಸಹಾಯಧನವಾಗಿ ರೂ. 98.01 ಲಕ್ಷಗಳನ್ನು ಮತ್ತು ದಿನಾಂಕ:12.3.2008ರಿಂದ ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳಿಂದ ಕಬ್ಬು ಸರಬರಾಜು ಮಾಡಿಕೊಂಡಿದ್ದು ಇದಕ್ಕೆ ರೂ. 2.58ಲಕ್ಷಗಳ ಸಾಗಾಣಿಕೆ ಸಹಾಯಧನ ಸೇರಿ ಒಟ್ಟು 100.59ಲಕ್ಷರೂಗಳನ್ನು ಕಾರ್ಖಾನೆಗೆ

ಬಿಡುಗಡೆ ಮಾಡಲು ಜಿಲ್ಲಾಧಿಕಾರಿ ಶಿವಮೊಗ್ಗ ಮತ್ತು ಜಿಲ್ಲಾಧಿಕಾರಿ ಚಿಕ್ಕಮಗಳೂರುರವರಿಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರು ಕಬ್ಬು ಅಭಿವೃದ್ಧಿರವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ 19 ಎಸ್‌ಜಿಎಫ್ 2008(ಭಾ–2)(2)ಬೆಂಗಳೂರು, ದಿನಾಂಕ:28ನೇ ಆಗಸ್ಟ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಮೆ:ಮೈಸೂರು ಪೇಪರ್ ಮಿಲ್ಸ್ (ಲಿ) ಸಕ್ಕರೆ ಕಾರ್ಖಾನೆ ಭದ್ರಾವತಿ ಈ ಕಾರ್ಖಾನೆಗೆ ನೀಡುವ ಸಲುವಾಗಿ 2007–08ನೇ ಸಾಲಿನ ಸಕ್ಕರೆ ವರ್ಷದಲ್ಲಿ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಪ್ರತಿ ಟನ್ ಕಬ್ಬಿಗೆ 100.00ರೂಗಳ ಸಹಾಯಧನವಾಗಿ 98,01,000/– ರೂ.ಗಳು (ತೊಂಬತ್ತೆಂಟು ಲಕ್ಷದ ಒಂದು ಸಾವಿರ ರೂ.ಗಳು ಮಾತ್ರ) ಮತ್ತು ಶಿವಮೊಗ್ಗ ಜಿಲ್ಲೆಯಿಂದ ಸರಬರಾಜು ಮಾಡಿಕೊಂಡ ಕಬ್ಬಿಗೆ ಪ್ರತಿ ಟನ್ ಗೆ ಪ್ರತಿ ಕಿ.ಮೀ. ರೂ. 2.00ರಂತೆ ಸಾಗಾಣಿಕೆ ಸಹಾಯಧನ 1,84,000/– ರೂಗಳು (ಒಂದು ಲಕ್ಷ ಎಂಬತ್ತು ನಾಲ್ಕು ಸಾವಿರ ರೂ.ಗಳು) ಸೇರಿ 99,85,000/–ರೂ,.ಗಳನ್ನು (ತೊಂಬತ್ತೊಂಬತ್ತು ಲಕ್ಷ ಎಂಬತ್ತೈದು ಸಾವಿರ ರೂ.ಗಳು ಮಾತ್ರ) ಶಿವಮೊಗ್ಗ ಜಿಲ್ಲಾಧಿಕಾರಿಯವರಿಗೆ ಮತ್ತು ಚಿಕ್ಕಮಗಳೂರು ಜಿಲ್ಲೆಯಿಂದ ಸರಬರಾಜು ಮಾಡಿಕೊಂಡ ಪ್ರತಿ ಟನ್ ಕಬ್ಬಿಗೆ ಕಿ.ಮೀ.ಗೆ ರೂ. 2.00ರಂತೆ 74,000/–ರೂಗಳ (ಎಪ್ಪತ್ತ ನಾಲ್ಕು ಸಾವಿರ ರೂ.ಗಳು ಮಾತ್ರ) ಸಾಗಾಣಿಕೆ ಸಹಾಯಧನವನ್ನು ಚಿಕ್ಕಮಗಳೂರು ಜಿಲ್ಲಾಧಿಕಾರಿಯವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2852–08–201–0–07(ಯೋಜನೆ) 106 ಸಹಾಯಧನ ಇದರಡಿಯಲ್ಲಿ 50.00ಕೋಟಿರೂಗಳನ್ನು ಒದಗಿಸಲಾಗಿದ್ದು, ಈ ಹಣದಲ್ಲಿ ಮೇಲಿನಂತೆ ಒಟ್ಟು 100.59 ಲಕ್ಷರೂ.ಗಳನ್ನು (ರೂ. 98,01,000+2,58,000) ಮೆ:ಮೈಸೂರು ಪೇಪರ್ ಮಿಲ್ಸ್ (ಲಿ) ಸಕ್ಕರೆ ಕಾರ್ಖಾನೆ ಭದ್ರಾವತಿ ಈ ಕಾರ್ಖಾನೆಗೆ ಸಹಾಯಧನವಾಗಿ ಬಿಡುಗಡೆ ಮಾಡಲು ಮಂಜೂರು ಮಾಡಲಾಗಿದೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಬಿಡುಗಡೆ ಮಾಡಲಾದ ಈ ಹಣವನ್ನು ಸರ್ಕಾರದ ಆದೇಶ ದಿನಾಂಕ:12.3.2008ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ ಜಿಲ್ಲಾಧಿಕಾರಿ ಶಿವಮೊಗ್ಗ ಮತ್ತು ಜಿಲ್ಲಾಧಿಕಾರಿ ಚಿಕ್ಕಮಗಳೂರು ರವರ ಮೂಲಕ ಮೆ:ಮೈಸೂರು ಪೇಪರ್ ಮಿಲ್ಸ್ (ಲಿ) ಸಕ್ಕರೆ ಕಾರ್ಖಾನೆ ಭದ್ರಾವತಿ ಈ ಕಾರ್ಖಾನೆಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದ್ದು, ಕಾರ್ಖಾನೆಯು ರೈತರಿಗೆ ಕಬ್ಬು ಖರೀದಿ ಬಾಕಿ ಉಳಿಸಿಕೊಂಡಿದ್ದಲ್ಲಿ ರೈತರಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡಲು ಕ್ರಮ ವಹಿಸತಕ್ಕದ್ದು. ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1254

**ಪಿ. ಆನಂದ್‌ಕುಮಾರ್.**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ತಿದ್ದೋಲೆ**

**ಸಂಖ್ಯೆ: ಸಿಆಸುಇ 54 ಎಸ್‌ಇಎನ್ 2006, ಬೆಂಗಳೂರು, ದಿನಾಂಕ:18ನೇ ಸೆಪ್ಟೆಂಬರ್ 2008**

ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 54 ಎಸ್‌ಇಎನ್ 2006, ದಿನಾಂಕ:7.8.2008ರಲ್ಲಿನ ಆದೇಶ ಭಾಗದಲ್ಲಿರುವ ಮಂಡನಾಧಿಕಾರಿಯ ಹುದ್ದೆಯನ್ನು "ಮುಖ್ಯ ಆಡಳಿತಾಧಿಕಾರಿ" ಆಯುಷ್ಯ ನಿರ್ದೇಶನಾಲಯ, ಬೆಂಗಳೂರು ಎಂದು ದಿನಾಂಕ:7–8–2008ರಿಂದಲೇ ಜಾರಿಗೆ ಬರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1320

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)